ತೇಱಿ ಇಯಂಬಿನರ್ ಶಿತ್ತುಂ ಅಶಿತ್ತುಂ ಇಱೈಯುಂ ಎನ
ವೇಱುಪಡುಂ ವಿಯನ್ ತತ್ತುವಂ ಮೂನ್ರುಂ ವಿನೈ ಉಡಂಬಿಲ್
ಕೂಱುಪಡುಂ ಕೊಡುಮೋಹಮುಂ ತಾನ್ ಇೞಿಯಾಂ ಕುಱಿಪ್ಪುಂ
ಮಾಱಿನಿನ್ನೈನ್ದು ಅರುಳಾಲ್ ಮಱೈನೂಲ್ ತನ್ದವಾದಿಯರೇ ॥೧೨॥

ವಾದಿಯರ್ ಮನ್ನುಂ ತರುಕ್ಕಚ್ಚೆರುಕ್ಕಿನ್ ಮಱೈಕುಲೈಯ
ಶಾದುಜನಙ್ಗಳ್ ಅಡಙ್ಗನಡುಙ್ಗತ್ ತನಿತ್ತನಿಯೇ
ಆದಿ ಎನಾವಹೈ ಆರಣದೇಶಿಕರ್ ಶಾಱ್ಱಿನರ್ ನಂ
ಪೋದಮರುಂ ತಿರುಮಾದುಡನ್ ನಿನ್ರ ಪುರಾಣನೈಯೈ ॥೧೩॥

ನಿನ್ರ ಪುರಾಣನ್ ಅಡಿಯಿಣೈ ಏನ್ದುಂ ನೆಡುಂ ಪಯನುಂ
ಪೊನ್ರುದಲೇ ನಿಲೈ ಎನ್ರಿಡಪ್ ಪೊಙ್ಗುಂ ಬವಕ್ಕಡಲುಂ
ನನ್ರಿದು ತೀಯದಿದು ಎನ್ರು ನವಿನ್ರವರ್ ನಲ್ಲರುಳಾಲ್
ವೆನ್ರು ಪುಲನ್ಗಳೈ *ವೀಡಿನೈ ವೇಣ್ಡುಂ ಪೆರುಂಪಯನೇ ॥೧೪॥

ವೇಣ್ಡುಂ ಪೆರುಂಪಯನ್ ವೀಡೆನ್ರಱಿನ್ದು ವಿದಿವಹೈಯಾಲ್
ನೀಣ್ಡುಂ ಕಱುಹಿಯುಂ ನಿಱ್ಕ ನಿಲೈಹಳುಕ್ಕೇಱ್ಕುಂ ಅನ್ಬರ್
ಮಾಣ್ಡೊನ್ರಿನ್ ಮೂಲವಿನೈ ಮಾಱ್ರುದಲಿಲ್ ಮುಹನ್ದನಡಿ
ಪೂಣ್ಡನ್ರಿ ಮಱ್ಱೋರ್ ಪುಹಲೊನ್ರು ಇಲೈ ಎನ ನಿನ್ರನರೇ ॥೧೫॥

ನಿನ್ರನಿಲೈಕ್ಕುರನಿಱ್ಕುಂಕಡುಮಮುಂ ನೇರ್ ಮದಿಯಾಲ್
ನನ್ರೆನ ನಾಡಿಯ ಜ್ಞಾನಮುಂ ನಲ್ಹುಂ ಉಳ್ಕಣ್ಡೈಯಾರ್
ಒನ್ರಿಯ ಪತ್ತಿಯುಂ ಒನ್ರುಮಿಲಾವಿರೈವಾಕ್ಕ್ಯ ಅರುಳಾಲ್
ಅನ್ರಿಯೆಲ್ ತರುಮಾಱುಂ ಅಱಿನ್ದವರ್ ಅನ್ದಣರೇ ॥೧೬॥

ಅನ್ದಣರ್ ಅನ್ದಿಯರ್ ಎಲ್ಲೈಯಿಲ್ ನಿನ್ರ ಅನೈತ್ತುಲಹುಂ
ನೊನ್ದವರೇ ಮುದಲಾಹ ನುಡಙ್ಗ ಇನ್ನಿಯರಾಯ್
ವನ್ದಡೈಯುಂ ವಹೈಂ ವಣ್ತಹವೇನ್ದಿ ವರುನ್ದಿಯ ನಂ
ಅನ್ದಮಿಲ್ ಆದಿಯೈ ಅನ್ಬರ್ ಅಱಿನ್ದು ಅಱಿಪಿತ್ತನರೇ ॥೧೭॥

*ವೀಡುಡೈ

ಅಱಿವಿತ್ತನರ್ ಅನ್ಬರ್ ಐಯಂ ಪಱ್ಱಿಯುಂ ಉಪಾಯಂ ಇಲ್ಲಾತ್
ತುಱವಿತ್ತ್ನಿಯಿಲ್ ತುಣೈಯಾಂ ಪರನ್ನೈ ವರಿಕ್ಕುಂ ವಹೈ
ಉಱವಿತ್ತನ್ನೈ ಇನ್ಱಿ ಒತ್ತಾರೆನ ನಿನ್ಱ ಉಂಬರೈ ನಾಂ
ಪಿಱವಿತ್ತುಯರ್ ಶೆಹುಪ್ಪೀರ್ ಎನ್ಱು ಇರುಕ್ಕುಂ ಪಿಣಾೞ್ ಅಱವೇ ॥೧೮॥

ಅಱವೇ ಪರಂ ಎನ್ಱು ಅಡೈಕ್ಕಲಂ ವೈತ್ತನರ್ ಅನ್ಱು ನಮ್ಮೈಪ್
ಪೆಱವೇ ಕರುದಿಪ್ ಪೆರುಂ ತಹವುಱ್ಱ ಪಿರಾನ್ ಅಡಿಕ್ಕೀೞ್
ಉಱವೇ ಇವನ್ ಉಯಿರ್ಕಾಕ್ಕಿನ್ಱ ಓರುಯಿರ್ ಉಣ್ಮೈಯೈಯೇ ನೀ
ಮಱವೇಲ್ ಎನ ನಂಬುಱ್ಱೈಮುಡಿ ಶೂಡಿಯ ಮನ್ನವರೇ ॥೧೯॥

ಮನ್ನವರ್ ವಿಣ್ಣವರ್ ವಾನೋ ಇಱೈ ಒನ್ಱು ವಾನ್‌ಕರುತ್ತೋರ್
ಅನ್ನವರ್ ವೇಳ್ವಿ ಅನೈತ್ತುಂ ಮುಡಿತ್ತನರ್ ಅನ್ಬುಡೈಯಾರ್ಕ್ಕು
ಎನ್ನವರಂ ತರ ಎನ್ಱ ನಂ ಅತ್ತಿಗಿರಿತ್ತಿರುಮಾಲ್
ಮುನ್ನಂ ಪರುನ್ದಿ ಅಡೈಕ್ಕಲಂ ಕೊಣ್ಡ ನಂ ಮುಕ್ಕಿಯರೇ ॥೨೦॥

ಮುಕ್ಕಿಯ ಮನ್ತಿರಂ ಕಾಟ್ಟಿಯ ಮೂನ್ಱಿಲ್ ನೆಲೈ ಉಡೈಯಾರ್
ತಕ್ಕವೈ ಅನ್ಱಿತ್ ತಹಾದವೈ ಒನ್ಱುಂ ತಮಕ್ಕಿಲೈಯಾರ್
ಇಕ್ಕರುಮಙ್ಗಳ್ ಎದುಕ್ಕುಳ ಎನ್ನುಂ ಇಲಕ್ಕಣತ್ತಾಲ್
ವಿಕ್ಕ ಉಣರ್ತ್ತಿಯರ್ ವೇದಿನಿ ಮೇವಿಯ ವಿಣ್ಣವರೇ ॥೨೧॥

ವಿಣ್ಣವರ್ ವೇಣ್ಡಿ ವಿಲಕ್ಕಿನ್ಱಿ ಮೇವುಂ ಅಡಿವೈ ಎಲಾಂ
ಮಣ್ಣುಲಹತ್ತಿಲ್ ಮಹಿೞ್ನ್ದಡೈಹಿನ್ಱನರ್ ವಣ್‌ತುವರೈಕ್
ಕಣ್ಣನ್ ಅಡೈಕ್ಕಲಂ ಕೊಳ್ಳಕ್ ಕಡನ್ಗಳ್ ಕೞಿಱ್ಱಿಯ ನಂ
ಪಣ್ಣಮರುಂ ತಮಿೞ್ವೇದಂ ಅಱಿನ್ದ ಪಹವರ್ಹಳೇ ॥೨೨॥

ವೇದವಱಿನ್ದ ಪಹವರ್ ವಿಯಕ್ಕ ವಿಳಙ್ಗಿಯಶೀರ್
ನಾದನ್ ವಹುತ್ತವಹೈ ಪೆಱುನಾಂ ಅವನ್ ನಲ್ಲಡಿಯಾರ್ಕ್ಕು
ಆದರ ಮಿಕ್ಕ ಅಡಿಮೈ ಇಶೈನ್ದು ಅೞಿಯಾ ಮಱೈನೂಲ್
ನೀದಿ ಅಱಿತ್ತ ನಿಲೈಕುಲೆ ಯಾ ವಹೆ ನಿನ್ಱನಮೇ ॥೨೩॥

ನಿನ್ಱನಂ ಅನ್ಬುಡೈ ವಾನೋರ್ನಿಲೈಯಿಲ್ ನಿಲಂ ಅಳನ್ದಾನ್
ನನ್ಱಿಯ ತೀಯದಿದು ಎನ್ಱು ನಡತ್ತಿಯ ನಾನ್ಮಱೈಯಾಲ್
ಇನ್ಱು ನಮಕ್ಕು ಇರವಾದಲಿನ್ ಇಮ್ಮದಿ ಇನ್ನಿಲವೇ
ಅನ್ಱಿ ಅಡಿಕ್ಕಡಿ ಆರಿರುಳ್ ತೀರ್ಕ್ಕ ಅಡಿಉಳದೇ ||೨೪||

ಉಳದಾನ ವಲ್ವಿನೈಕ್ಕು ಉಳ್ಳಂವೆರುವಿ ಉಲಹಳನ್ದ
ವಳರ್ತಾಮರೈ ಇಣೈ ವಣ್ಶರಣಾಹ ವರಿತ್ತವರ್ ದಾಂ
ಕಳೈದಾನ್ ಎನ ಎಲ್ಲಾಂ ಕನ್ಮಂ ತುಱಪ್ಪರ್, ತುಱನ್ದಿಡಿನುಂ
ಇಳೈದಾನಿಲೈ ಶೆಹ ಎಙ್ಗಳ್ ಪಿರಾನ್ ಅರುಳ್ ತೇನ್ಱೆವೋ ||೨೫||

** ತೇನಾರ್ಕಮಲತ್ತಿರುಮಹಳ್ ನಾದನ್ ತಿಹೞ್ನ್ದಱೈಯುಂ
ವಾನಾಡುಹನ್ದವರ್ ವೈಯತ್ತಿರುಪ್ಪಿಡಂ ವನ್ತರುಮಕ್
ಕಾನಾಱುಮ್ಮೈಯಮುಂ ಗಂಗೈಯುಂ ಕಾವಿರಿಯುಂ ಕಡಲುಂ
ನಾನಾನಹರಮುಂ ನಾಹಮುಂ ಕೂಡಿಯ ನನ್ನಿಲಮೇ ||೨೬||

ನನ್ನಿಲಂ ಆಮದು ನಱ್ಪಹಲ್ ಆಮದು ನನ್ನಿಮಿತ್ತಂ
ಎನ್ನಲುಂ ಆಮದು ಯಾದಾನುಮಾಂ ಅರಙ್ಗರ್ ಅಡಿಯವರ್ಕ್ಕು
ಮಿನ್ನಿಲೈ ಮೇನಿವಿಡುಂ ಪಯಣತ್ತು ವಿಲಕ್ಕಿಲದೋರ್
ನನ್ನಿಲೈಯಾಂ ನಡುನಾಡಿ ವೞಿಕ್ಕು ನಡೈಪೆಱವೇ ||೨೭||

ನಡೈಪೆಱ ಅಙ್ಗಪ್ಪಹಲ್ ಒಳಿನಾಳ್ ಉತ್ತರಾಯಣಂ ಆಣ್ಡು
ಇಡೈವರು ಕಾಱ್ಱು ಇರವಿ ಇರವಿನ್ಪದಿಮಿನ್ ವರುಣನ್
ಕುಡೈ ಉಡೈ ವಾನವರ್ ಕೋಮಾನ್ ಪಿರಶಾಪದಿ ಎನ್ಱು ಇವರಾಲ್
ಇಡೈ ಇಡೈ ಪೋಗಙ್ಗಳ್ ಎಯ್ದಿ ಎೞಿಲ್ಪದಂ ಏಱುವರೇ ||೨೮||

ಏಱಿ ಎೞಿಲ್ಪದಂ ಎಲ್ಲಾ ಉಯಿರ್ಕ್ಕುಂ ಇದಂ ಉಹಕ್ಕುಂ
ನಾಱುತುೞಾಯ್ ಮುಡಿ ನಾದನೈ ನಣ್ಣಿ ಅಡಿಮೈಯಿಲ್ ನಂ
ಕೂಱುಕವನ್ದ ಗುರುಕ್ಕಳಾ ಕುೞಾಙ್ಗಳ್ ಕುರೈಕೞಲ್ ಕೀೞ್
ಮಾಟುದಲ್ ಇನ್ಱಿ ಮಹಿೞ್ನ್ದೆಲ್ಲಾಂ ಬೋಗತ್ತು ಮನ್ನುವಮೇ ||೨೯||

**ಮನ್ನು ಅನೈತ್ತುಜಿಪಾಯ್ ಮರುಳ್ಮಾಜ್ರಿರುಳ್ ಅೞ್ಖಿಯುಮಾಯ್
ತನ್ ನಿನೈವಾಲ್ ಅನೈತ್ತುಂ ದರಿತ್ತೋೞ್ಗುಂ ತನಿ ಇಜೈಯಾಯ್
ಇನ್ ಅಮುದತ್ತು ಅಮುದಾಲ್ ಇರಙ್ಗುಂ ತಿರುನಾರಣನೇ
ಮನ್ನಿ ಅವನ್ ಶರಣ್ ಮಜಿೂಱೇರ್ ಪಜಿನ್ರಿ ವರಿಪ್ಪವರ್ಕ್ಕೇ ॥೩೦॥

ವರಿಕ್ಕಿನ್ರನನ್ ಪರನ್ಯಾವರ್ಕ್ಕೈ ಎನ್ರು ಮಜೈಯದನಿಲ್
ವಿರಿಕ್ಕಿನ್ರಪುಂ ಕುಜಿ ಒನ್ರಾಲ್ ವಿನೈಯರ್ಕ್ಕೈ ಆದಲಿನ್ನಾಮ್
ಉರೈಕ್ಕಿನ್ರ ನನ್ನೆಜಿ ಓರುಂಬಡಿಹಳಿಲ್ ಓನ್ರ್ದ ಉಲಹಂ
ದರಿಕ್ಕಿನ್ರ ದಾರಹನಾರ್ ತಹವಾಲ್ ದರಿಕ್ಕಿನ್ರನಮೇ ॥೩೧॥

ತಹವಾಲ್ ತರಿಕ್ಕಿನ್ರ ತನ್ನಡಿಯಾರ್ಹಳೈತ್ತನ್ ತಿಜತ್ತಿಲ್
ಮಿಹ ಆದರಂಶೆಯ್ಯುಂ ಮೆಯ್ಯರುಳ್ ವಿತ್ತಹನ್ ಮೆಯ್ಯುರೈಯಿನ್
ಅಹವಾಯಟಿನ್ದವರ್ ಅರಣನೀದಿ ನೆಜಿ ಕುಲೈದಲ್
ಉಹವಾರೆನ ಎಙ್ಗಳ್ ದೇಶಿಕರ್ ಉಣ್ಮೈ ಉರೈತ್ತನರೇ ॥೩೨॥

ಉಣ್ಮೈ ಉರೈಕ್ಕುಂ ಮಜೈ ಹಳಿಲ್ ಓಂಗಿಯ ಉತ್ತಮನಾರ್
ವಣ್ಮೈ ಅಳಪ್ಪರಿದಾದಲಿನ್ ವನ್ದುಕೞಲ್ ಪಣಿವಾರ್
ತಣ್ಮೈ ಕಿಡಕ್ಕತ್ತರಮುಳವೆನ್ರ ಪಿಯಪ್ಪಿಲದಾಂ
ಉಣ್ಮೈ ಉರೈತ್ತನರ್ ಓರಂ ತವಿರ ಉಯರ್ನ್ದನರೇ ॥೩೩॥

ಉಯರ್ನ್ದನನ್ ಕಾವಲನಲ್ಲಾರ್ಕ್ಕು ಉಂಪೈ ತುಜನ್ದುಯಿರಾಯ್
ಮಯರ್ನ್ದವೈ ತೀರ್ನ್ದಮಜಿೂಱೇರ್ ವೞಿನ್ರಿ ಅಡೈಕ್ಕಲಮಾಯ್ಪ್
ಪಯನ್ದವನ್ ನಾರಣನ್ ಪಾದಙ್ಗಳ್ ಶೇರ್ನ್ದ ಪೞವಡಿಯಾರ್
ನಯನ್ದ ಕಜ್ರಿವಲ್ ಎಲ್ಲಾಂ ನಾಡುಂ ನನ್ಮನು ಓದಿನಮೇ ॥೩೪॥

ಓದುಂ ಇರಣ್ಡೈ ಇಶೈತ್ತು ಅರುಳಾಲ್ ಉದವುಂ ತಿರುಮಾಲ್
ಪಾದಂ ಇರಣ್ಡುಂ ಶರಣ್ ಎನಪ್ಪಜ್ರಿ ನಂಪಙ್ಕಯತ್ತಾಳ್
ನಾದನೈನಣ್ಣಿ ನಲಂಞ್ನಾಟ್ಟಿಲ್ ಅಡಿಮೈ ಎಲ್ಲಾಂ
ಕೋದಿಲುಣರ್ತ್ತಿ ಉಡನ್ ಕೊಳ್ಳುಮಾಟು ಕುಜಿತ್ತನಮೇ ॥೩೫॥

ಕುಱಿಪ್ಪುಡನ್ ಮೇವುಂ ದರುಮಙ್ಗಳಿನ್ಱಿ ಅಕ್ಕೋವಲನಾರ್
ವೆಱಿತ್ತುಳವಕ್ಕೞಲ್ ಮೆಯ್ಯರಣ್ ಎನ್ಱು ವಿರೈನ್ದಡೈನ್ದು
ಪಿಱಿತ್ತ ವಿನೈತ್ತಿಱಳ್ ಪಿನ್ ತೊಡರಾವಹೈ ಅಪ್ಪೆರಿಯೋರ್
ಮಱಿಪ್ಪುಡೈ ಮನ್ನರುಳ್ವಾಶಹತ್ತಾಲ್ ಮರುಳಱ್ಱನಮೇ ॥೩೬॥

ಮರುಳಱ್ಱ ದೇಶಿಕರ್ ವಾನುಹಪ್ಪಾಲ್ ಇನ್ದ ವೈಯಮೆಲ್ಲಾಂ
ಇರುಳಱ್ಱು ಇಱೈಯವನ್ ಇಣೈಯಡಿ ಪೂಣ್ಡುಯ್ಯ ಎಣ್ಣುದಲಾಲ್
ತೆರುಳುಱ್ಱ ಶೆನ್ದೊೞಿಲ್ ಶೆಲ್ವಂ ಪೆರುಹಿಚ್ ಚಿಱನ್ದವರ್ಪಾಲ್
ಅರುಳುಱ್ಱ ಶಿನ್ದೈಯಿನಾಲ್ ಅೞಿಯಾವಿಳಕ್ಕೇಱ್ಱಿನರೇ ॥೩೭॥

ಏಱ್ಱಿಮನತ್ತು ಎೞಿಲ್ಞಾನವಿಳಕ್ಕೈ ಇರುಳನೈತ್ತುಂ
ಮಾಱ್ಱಿನವರ್ಕ್ಕು ಒರುಕೈಮ್ಮಾಱು ಮಾಯನುಂ ಕಾಣಹಿಲ್ಲಾನ್
ಪೋಱ್ಱಿ ಉಹಪ್ಪದುಂ ಪುನ್ದಿಯಿಲ್ ಕೊಳ್ವದುಂ ಪೊಙ್ಗುಪುಹೞ್
ಶಾಱ್ಱಿ ವಳರ್ಪ್ಪದುಂ ಶಱ್ಱಲ್ಲವೋ ಮುನ್ನಂ ಪೆಱ್ಱದರ್ಕ್ಕೇ ॥೩೮॥

ಮುನ್ ಪೆಱ್ಱ ಞಾನಮುಂ ಮೋಹಂ ತುಱಕ್ಕಲುಂ ಮೂನ್ಱಿರೈಯಿಲ್
ತನ್ಪಱ್ಱು ತನ್ಮೈಯುಂ ತಾೞ್ನ್ದವರ್ಕ್ಕೇಯುಂ ತನಿತ್ತಹವುಂ
ಮುನ್ಪಱ್ಱಿನಿನ್ಱವಹೈ ಉಡೈಕ್ಕಿನ್ಱ ಮಾಱೈಯುವರ್ ಪಾಲ್
ಶಿನ್ಪಱ್ಱಿ ಎನ್ಪಯನ್ ಶೀರಱ್ಱುವೋರ್ಕ್ಕು ಇವೈ ಶೆಪ್ಪಿನಮೇ ॥೩೯॥

**ಶೆಪ್ಪಚ್ಚಿಱಿಕ್ಕಮುಡೈನ್ನತ್ತಿಹೞಾಂ ಶೆೞುಙ್ಗುಣತ್ತುತ್
ತಪ್ಪಱ್ಱವರ್ಕ್ಕುತ್ ತಾಮೇ ಉಹನ್ದುತರುಂ ತಹವಾಲ್
ಒಪ್ಪಱ್ಱ ನಾನ್ಮಱೈ ಉಳ್ಳಕ್ಕರುತ್ತಿಲ್ ಉಱೈತ್ತುರೈತ್ತ
ಮುಪ್ಪತ್ತಿರಣ್ಡಿವೈ ಮುತ್ತಮಿೞ್ಶೇರ್ನ್ದ ಮೊೞಿತ್ತಿರುವೇ ॥೪೦॥

(ತಿರುವುಡನ್ ವನ್ದ ಶೆೞುಮಣಿಪೋಲ್ ತಿರುಮಾಲಿದಯಂ
ಮರುವಿಡ ಮೆನ್ನ, ಮಲರಡಿ ಶೂಡುಂ ವಹೈಪೆಱು ನಾಂ
ಕರುವುಡನ್ ವನ್ದ ಕಡುವಿನೈ ಆಱ್ಱಿಲ್ ವಿೞುನ್ದೊೞಿಯಾದು
ಅರುವುಡನ್ ಐನ್ದಱಿವಾರ್ ಅರುಳ್ ಶೆಯ್ಯ ಅಮೈನ್ದನರೇ)

** ಪುರುಡನ್ ಮಣಿವರವಾಹಪ್ ಪೊನ್ನಾ ಮೂಲಪ್
ಪಿರಕಿರುದಿ ಮಜ್ಞಾಹ ಮಾನ್ ತಣ್ಣಾಹತ್
ತೆರುಳ್ಮರುಳ್ಮಾಳ್ ಉಜ್ಞ್ವೈವ ನೈಯಾಪ ಅಜ್ಞಗರಜ್ಞಳ್
ಶಾರ್ಜ್ಞಂ ಶಜ್ಞ್ಞಹ ಮನಂ ತಿಹಿರಿಯಾಹ
ಇರುಡೀಹಜ್ಞಳ್ ಈರೈನ್ದಂ ಶರಜ್ಞಳಾಹ
ಇರುಬೂತಮಾಲೈ ವನಮಾಲೈಯಾಹ
ಗರುಡನ್ ಉರುವಾಂ ಮಜ್ಞೈಯಿನ್ ಪೊರುಳಾಂ ಕಣ್ಣನ್
ಕರಿಗಿರಿ ಮೇಲ್ ನಿನ್ರು ಅನೈತ್ತುಂ ಕಾಕ್ಕಿನ್ರಾನೇ ॥೪೧॥

ಅ** ಊದ ಅರುಳಮುದಂ ಪೊದಿನ್ದ ಕೋಯಿಲ್
ಅಂಬುಯತ್ತೋನ್ ಆಯೋತ್ತಿ ಮನ್ನರ್ಕ್ಕ ಅಳಿತ್ತಕೋಯಿಲ್
ತೋಲಾದ ತನಿವೀರನ್ ತೊಳ್ದ ಕೋಯಿಲ್
ತುಣೈಯಾನ ವೀಡಣರ್ಕ್ಕ ತ್ತುಣೈಯಾಂ ಕೋಯಿಲ್
ಶೇರಾದ ಪಯನ್ ಎಲ್ಲಾಂ ಶೇರ್ಕ್ಕುಂ ಕೋಯಿಲ್
ಶೆಳ್ಮ ಮುಜ್ಞೈಯಿನ್ ಮುದಲ್ ಎಳ್ದತ್ತುಚ್ಚೇರ್ನ್ದ ಕೋಯಿಲ್
ತೀರಾದ ವಿನೈ ಅನೈತ್ತುಂ ತೀರ್ಕ್ಕುಂ ಕೋಯಿಲ್
ತಿರು ಅರಜ್ಞಂ ಎನತ್ತಿಹಳ್ಲಾಂ ಕೋಯಿಲ್ ದಾನೇ ॥೪೨॥

** ಕಣ್ಣನ್ ಅಡಿಇಣೈ ಎಮಕ್ಕು ಕ್ಕಾಟ್ಟುಂ ವೆಜ್ಞ
ಕಡುವಿನೈಯರ್ ಇರುವಿನೈಯುಂ ಕಡಿಯುಂ ಪೆಜ್ಞ
ತಿಣ್ಣಂಇದು ವೀಡೆನ್ನತ್ತಿಹಳ್ಲಾಂ ವೆಜ್ಞ
ತೆಳಿನ್ದಪೆರುಂ ತೀರ್ತ್ತಜ್ಞಳ್ ಶೆಜ್ಞನ್ದ ವೆಜ್ಞ
ಪುಣ್ಣಿಯತ್ತಿನ್ ಪುಹಳ್ಇದೆನ್ನು ಪುಹಳ್ಲಾಂ ವೆಜ್ಞ
ಪೊನ್ನುಲಹಿಲ್ ಪೋಹಮೆಲ್ಲಾಂ ಪುಣರ್ಕ್ಕುಂ ವೆಜ್ಞ
ವಿಣ್ಣವರುಂ ಮಣ್ಣವರುಂ ವಿರುಂಬುಂ ವೆಜ್ಞ
ವೇಜ್ಞಡ ವೆಜ್ಞ ಎನ ವಿಳಜ್ಞಂ ವೇದವೆಜ್ಞೇ ॥೪೩॥

Funding: IKS/Tattva Heritage and IKS-MoE. Digitization: eGangotri.



* ಉತ್ತಮ ಅಮರ್ತಲಂ ಅಪ್ಪೈತ್ತದೋರ್, ಎಳ್ಳಿಲ್‌ತನು ಉಯತ್ತ್ರ
ಕಣ್ಣೈಯಾರ್
ಅತ್ತಿರ ಅರಕ್ಕನ್ ಮುಡಿಪತ್ತುಂ ಒರುಕೊತ್ತೆನ, ಉದಿರ್ತ್ತ ತಿಜಲೋನ್
ಮತ್ತುಜು ಮಿಹುತ್ತತಯಿರ್ ವೊಯ್‌ತ್ತವೆಣ್ಣೆಯ್, ವೈತ್ತದು ಉಣುಂ
ಅತ್ತನ್ ಇಡಮಾಂ
ಅತ್ತಿಗಿರಿ ಪತ್ತರ್‌ವಿನ್ನೈ ತೊತ್ತುಜಿ ಅಜುಕ್ಕುಂ, ಅಣಿ ಅತ್ತಿಗಿರಿಯೇ ॥೪೪॥

ಎಟ್ಟುವಮಾಮೂರ್ತ್ತಿ ಎಣ್‌ಕಣ್ಣನ್ ಎಣ್‌ತಿಕ್ಕು, ಎಟ್ಟಿಜಿತ್ತೈ ಎಣ್ ಪಿರಕಿರುದಿ
ಎಟ್ಟು ಮಾವರೈಹಳ್ ಈನ್ರ ಎಣ್‌ಗುಣತ್ತೋನ್, ಎಟ್ಟೆಣುಂ ಎಣ್‌ಗುಣ
ಮದಿಯೋರ್ಕ್ಕು
ಎಟ್ಟುಮಾಮಲರ್ ಎಣ್‌ಶಿತ್ತಿ ಎಣ್‌ಪತ್ತಿ, ಎಟ್ಟುಯೋಗಾಂಗಂ ಎಣ್ ಶೆಲ್ವಂ
ಎಟ್ಟು ಮಾಗುಣಂ ಎಟ್ಟಿಟ್ಟೆಣುಂಕಲ್ಯೆ, ಏಟ್ಟರದಮೇಲ್ ಅದುವುಂ
ಎಟ್ಟನವೇ ॥೪೫॥

ಒಣ್ಡೊಡಿಯಾಳ್ ತಿರುವುಹಳುಂ ತಾನುಂ ಆಹಿ
ಒರುನಿನ್ನೈಪಾಲ್ ಈನ್ರ ಉಯಿರೆಲ್ಲಾಂ ಉಯ್ಯ
ವಣ್‌ತುವರೈನಹರ್ ವಾಳ್ವಶುದೇವಜ್ಕುಯ್
ಮನ್ನವರ್ಕ್ಕುತ್ ತೇರ್‌ಪ್ಪಾಹನ್ ಆಹಿ ನಿನ್ರ
ತಣ್‌ತುಳವ ಮಲರ್‌ಮಾರ್ಬನ್ ತಾನೇಶೊನ್ನ
ತನಿತ್ತರುಮಂ ತಾನ್ ಎಮಕ್ಕಾಯ್‌ತ್ ತನ್ನೈ ಎನ್ರುಂ
ಕಣ್ಣುಕಳಿತ್ತು ಅಡಿಶೂಡ ವಿಳಕ್ಕಾಯ್ ನಿನ್ರ
ಕಣ್‌ಪುದೈಯಲ್ ವಿಳೈಯಾಟ್ಟೈಕ್ ಕಳ್ಳಿಕ್ಕಿನ್ರಾನೇ ॥೪೬॥

ಮೂಣ್ಡಾಲುಂ ಮರೈಯದನಿಲ್ ಮುಯಲವೇಣ್ಡಾ
ಮುನ್ನಂ ಅದಿಲ್ ಅಶೈದನ್ನೈ ವಿಡುಹೈ ತಿಣ್ಣೈ
ವೇಣ್ಡಾದು ಶರಣನೆಜುವೇಜುಣೋರ್ ಕೂಟ್ಟು
ವೇಣ್ಡಲ್ ಅಯನ್ ಅತ್ತಿರಂಪೋಲ್ ವೆಳ್ಳಿ ನಿಜ್ಕುಂ

ನೀಣ್ಡಾದು ನಿಱ್ಕೈಮದಿಯೋರ್ ನೆಱಿಯಿಲ್ ಕೂಡಾ
ನಿನ್ ತನಿಮೈ ತುಣೈಯಾಹ ಎನ್ತನ್ಪಾದಂ
ಪೂಣ್ಡಾಲ್, ಉನ್ಪಿಱ್ಱೈಹಳ್ ಎಲ್ಲಾಂ ಪೊಱುಪ್ಪನ್ ಎನ್ರು
ಪುಣ್ಣಿಯನಾರ್ ಪುಹಹ್ನ್ದಿನೈತ್ತುಂ ಪುಹಹ್ಲಾವೋಮೇ ॥೪೭॥

ಶಾದನಮುಂ ನಟ್ಪಿಯನುಂ ನಾನೇ ಅವನ್
ಶಾದನಮುಂ ಎನ್ ವಶಮಾಯ್ ಎನ್ನೆ ಎನ್ನೈಪ್ಪುಱುಂ
ಶಾದನಙ್ಗಳ್ ಇನ್ನಿಲೈಕ್ಕು ಓರ್ ಇಡೈಯಿಲ್ನಿಲ್ಲಾ
ವೇದನೈಶೇರ್ ವೇಱುಙ್ಗಂ ಇದನಿಲ್ ವೇಣ್ಡಾ
ವೇಱೆಲ್ಲಾಂ ನಿಱ್ಕುಂ ನಿಲೈ ನಾನೇ ನಿಱ್ಪನ್
ತೂದನುಮಾಂ ನಾದನುಮಾಂ ಎನ್ನೈಪ್ಪಱ್ರಿಚ್
ಚೋಹಂತೀರ್ ಎನ ಉರೈತ್ತಾನ್ ಶೂಹ್ನ್ದಿಹನ್ರಾನೇ ॥೪೮॥

ತನ್ನಿನ್ನೈವಿಲ್ ವಿಲಕ್ಕಿನ್ರಿತ್ ತನ್ನೈನಣ್ಣಾರ್
ನಿನ್ನೈವು ಅನೈತ್ತುಂ ತಾನ್ ವಿಳೈತ್ತು ವಿಲಕ್ಕುನಾದನ್
ಎನ್ ನಿನೈವೈ ಇಪ್ಪವತ್ತಿಲ್ ಇನ್ರು ಮಾಱಿ
ಇಣೈ ಅಡಿಕ್ಕೀಹ್ನ್ದ ಅಡೈಕ್ಕಲಂ ಎನ್ರು ಎಮ್ಮೈವೈತ್ತ್
ಮುನ್ ನಿನೈವಾಲ್ ಯಾಂ ಮುಯನ್ರ ವಿನೈಯಾಲ್ ವನ್ದ
ಮಱಿವು ಅಯನ್ರ್ದ ಮುತ್ತಿತರ ಮುನ್ನೇತೋನ್ರಿ
ನಲ್ ನಿನೈಪಾಲ್ ನಾಂ ಇಶೈಯುಂ ಕಾಲಂ ಇನ್ರೋ
ನಾಳೈಯೋ ಎನ ನಹೈ ಶೆಯ್ವಿನ್ರಾನೇ ॥೪೯॥

** ಪಾಟ್ಟುಕ್ಕುಟಿಯ ಪಣ್ಣೂಯವರ್ ಮೂವರೈಪ್ ಪಣ್ಡೊರುಹಾಲ್
ಮಾಟ್ಟುಕ್ಕರುಳ್ದರು ಮಾಯನ್ ಮಲಿನ್ದು ವರತ್ತುದಲಾಲ್
ನಾಟ್ಟುಕ್ಕಿರುಳ್ಶೆಹ ನಾನ್ಮಱೈ ಅನ್ದಿನಡೈ ವಿಳಙ್ಗ
ವೀಟ್ಟುಕ್ಕಿಡೈಹಹ್ನಿಕ್ಕೇ ವೆಳಿಕಾಟ್ಟುಂ ಅಂ ಮೆಯ್ವಿಳಕ್ಕೇ ॥೫೦॥

** ಉಱು ಶಹಡಂ ಉಡ್ಯೆಯ ಒರುಕಾಲ್ ಉಱ್ಱುಣರ್ನ್ದನ
ಉಡನ್ ಮಱುದಂ ಒಡಿಯ ಓರುಪೋದಿಲ್ ಶವಟ್ಟಿನ್ದನ
ಉರಿತಡವುಂ ಅಳವಿಲ್ ಉರಲೂಡುಱ್ಱು ನಿನ್ಱನ
ಉಱುನೆಱಿ ಓರ್ ತರುಮನ್ವಿಡು ತೂದುಕ್ಕು ಉಹನ್ದನ

ಮಱನೆಱಿಯರ್ ಮುಱಿಯ ಪಿರುದಾನತ್ತು ವನ್ದನ
ಮಲರ್ ಮಹಳ್ ಕೈವರುಡ ಮಲರ್ ಪೋದಿಲ್ ಶಿವನ್ದನ
ಮಱುಪಿಱವಿ ಅಱು ಮುನಿವರ್ ಮಾಲುಕ್ಕು ಇಶೈನ್ದನ
ಮನುಮುಱೈಯಿಲ್ ವರುವದೋರ್ ವಿಮಾನತ್ತು ಉಱೈನ್ದನ

ಅಱಂ ಉಡ್ಯೆಯ ವಿಶಯನ್ ಅಮರ್ ತೇರಿಲ್ ತಿಹಟ್ಟಿನ್ದನ
ಅಡಲ್ ಉರಗ ಪಡಂ ಮುಡಿಯ ಅಡಿಕ್ಕಡಿನ್ದನ
ಅಱುಶಮಯಂ ಅಱಿವರಿಯ ದಾನತ್ತು ಅಮರ್ನ್ದನ
ಅಣಿಕುರುಹೈ ನಹರ್ ಮುನಿವರ್ ನಾವುಕ್ಕು ಅಮೈನ್ದನ

ವೆಱಿ ಉಡ್ಯೆಯ ತುಳವ ಮಲರ್ ವೀಱುಕ್ಕು ಅಣಿನ್ದನ
ವಿಟ್ಟಕರಿ ಓರ್ ಕುಮರನ್ ಎನ ವೇವಿಚ್ಚಿ ಱನ್ದನ
ವಿಱಲ್ ಅಶುರರ್ ಪಡ್ಯೆ ಅಡ್ಯೆಯ ವೀಯತ್ತೊಡರ್ನ್ದನ (ತುರನ್ದನ)
ವಿಡಲ್ ಅರಿಯ ಪೆರಿಯ ಪೆರುಮಾಳ್ ಮೆಯ್ಪ್ಪದಙ್ಗಳೇ ॥೫೧॥

ಮಱೈ ಉರೈಕ್ಕುಂ ಪೊರುಳೆಲ್ಲಾಂ ಮೆಯ್ಯೆನ್ಱು ಓರ್ವಾರ್
ಮನ್ನಿಯ ಕೂರ್ ಮದಿಯುಡ್ಯೆಯಾರ್ ವಣ್ಗುಣತ್ತಿಲ್
ಕುಱೈ ಉರೈಕ್ಕ ನಿನೈವಿಲ್ಲಾರ್ ಗುರುಕ್ಕಳ್ ತಂಪಾಲ್
ಕೋದಱ್ಱ ಮನಂ ಪೆಱ್ಱಾರ್ ಕೊಳ್ವಾರ್ ನನ್ಮೈ
ಶಿಱೈವಳರ್ಕ್ಕುಂ ಶಿಲಮ್ಮಾನರ್ ಶಙ್ಗೇದತ್ತಾಲ್
ಶಿದೈಯಾದ ತಿಣ್ಮದಿಯೋರ್ ತೆರಿನ್ದದೋರ್ವಾರ್
ಪೊಱೈ ನಿಲತ್ತಿನ್ ಮಿಹುಂ ಪುನಿದರ್ ಕಾಟ್ಟುಂ ಎಙ್ಗಳ್
ಪೊನ್ಱಾದ ನಲ್ ನೆಱಿಯಿಲ್ ಪುಹುದು ವಾರೇ ॥೫೨॥

ಇದುವಲ್ಲಿ ಇನ್ನಮುದು ಎನ್ರವರ್ ಇನ್ಪುಲನ್ ವೇಱುಡುವಾರ್
ಇದುವಲ್ಲಿ ಆಂ ಅಲ ಎನ್ರುಱೈಪ್ಪಾರ್ ಎಙ್ಗಳ್ ದೇಶಿಹರೇ
ಇದುವಲ್ಲಿ ಎಯ್ದ್ದುಹ ಎನ್ರು ಉಹಪ್ಪಾಲ್ ಎಂ ಪಿಱಲ್ಲಾಪ್ಪೋಱುಪ್ಪಾರ್
ಇದುವಲ್ಲಿಯಾಮಱ್ಕ್ಕೈಯೋರ್ ಅರುಳಾಲ್ ಯಾಂ ಇಶೈನ್ದನಮೇ॥೫೩॥

ಎಟ್ಟುಂ ಇರಣ್ಡುಂ ಅಱಿಯಾದ ಎಮ್ಮೈ ಇವೈ ಅಱಿವಿತ್ತು
ಎಟ್ಟ ಒಣ್ಣಾದ ಇಡಂ ತರುಂ ಎಙ್ಗಳ್ದಂ ಮಾದವನಾರ್
ಮುಟ್ಟ ವಿನೈತ್ತಿಱಳ್ ಮಾಳ ಮುಯನ್ರಿಡುಂ ಅಞ್ಜಲ್ ಎನ್ರಾರ್
ಕಟ್ಟೆಲ್ಲಿಲ್ ವಾಶಹತ್ತಾಲ್ ಕಲಙ್ಗಾನಿಲ್ಮೈ ಪೆಱ್ರನಮೇ ॥೫೪॥

** ವಾನುಳ್ ಅಮರ್ನ್ದ್ದವರ್ಕ್ಕುಂ ವರುನ್ದವರುನಿಲ್ಲೈಹಳ್
ತಾನ್ ಉಳನಾಯ್ ಉಹಕ್ಕುಂ ತರಂ ಇಙ್ಗ ನಮುಕ್ಕುಳದೇ
ಕೂನುಳ ನೆಂಜುಹಳಾರ್ ಕಱ್ರುಂ ಎಣ್ಣ ಇಹಲ್ಲುನ್ದಿನುಂ
ತೇನುಳ ಪಾದಮಲರ್ ತಿರುಮಾಲುಕ್ಕುತ್ತಿತ್ತಿಕ್ಕುಮೇ ॥೫೫॥

** ವೆಳ್ಳೈಪ್ಪುರಿಮುಹರ್ ದೇಶಿಹರಾಯ್ ವಿರಹಾಲ್, ಅಡಿಯೋಂ
. ಉಳ್ಳತ್ತು ಎಲ್ಲುದಿಯದು ಓಲೈಯಿಲ್ ಇಟ್ಟನಂ ಯಾಂ ಇದಱ್ಕಿನ್
ಕೊಳ್ಳತ್ತುಣಿಯಿನುಂ ಕೋದೆನ್ರುಹಲ್ಲಿನುಂ ಕೂರ್ಮದಿಯಿಾರ್
ಎಳ್ಳತ್ತನೈ ಉಹವಾದು ಇಹಲ್ಲಾದು ಎನ್ ಎಲ್ಲಿಲ್ ಮದಿಯೇ ॥೫೬॥

---

ಅಡಿವರವು :— ಪೊಯ್ಹ್ನೈ, ಇನ್ಪತ್ತಿಲ್. ಎನ್ನುಯಿರ್, ಆರಣನೂಲ್, ನೀಳವನ್ದು. ಕಾಳಂವಲಂ, ಆಳುಂ ಅಡೈ, ತಿರುವುಡನ್– ತಿರುರ್ಡ, ಪುರುಡನ್, ಆರಾದ ಅರುಳ್, ಕಣ್ಣನ್, ಅಡಿ, ಉತ್ತಮಾ, ಎಟ್ಟುಮಾ, ಒಣ್ದೊಡಿ, ಮುಣ್ಡಾಲುಂ ಶಾದನಮುಂ, ತನ್ನಿನೈವಿಲ್.

ತನ್ನಿನೈವಿಲ್ ಪಾಟ್ಟುಕ್ಕು, ಉಱುಶಹಡಂ, ಮಱ್ಕೈ ಉರೈ, ಇದುವಲ್ಲಿ, ಎಟ್ಟುಂ, ಇರಣ್ಡುಂ, ವಾನುಳ್, ವೆಳ್ಳೈ

ಶೀರಾರ್ ತೂಪ್ಪುಲ್ ತಿರುವೇಙ್ಗಡಂ ಉಡೈಯಾನ್ ತಿರುವಡಿಹಳೇ ಶರಣಂ,

---

ಶ್ರೀಃ

## ಶ್ರೀಮಂತೇ ರಾಮಾನುಜಾಯ ನಮಃ

## ಶ್ರೀ ಉಡೈಯವರ್ (ಎಂಬೆರುಮಾನಾರ್) ವೈಭವಂ

———

ಯೋನಿತ್ಯಮಚ್ಯುತಪದಾಂಬುಜಯುಗ್ಮರುಕ್ಮ
ವ್ಯಾಮೋಹತಸ್ತದಿತರಾಣಿ ತೃಣಾಯಮೇನೇ ॥
ಅಸ್ಮದ್ಗುರೋರ್ಭಗವತೋಽಸ್ಯ ದಯೈಕಸಿನ್ಧೋಃ
ರಾಮಾನುಜಸ್ಯ ಚರಣೌ ಶರಣಂ ಪ್ರಪದ್ಯೇ ॥

———

ಶ್ರೀಯಃಪತಿಯೂ ಸಕಲಕಲ್ಯಾಣಗುಣಾತ್ಮಕನೂ ಪರಮಕಾರುಣಿಕನೂ ಆದ ಶ್ರೀಮನ್ನಾರಾಯಣನು ಪರಮಪದವೆಂಬ ನಿತ್ಯವಿಭೂತಿಯಲ್ಲಿ ನಿತ್ಯಮುಕ್ತರುಗಳಿಂದ ಸಕಲ ವಿಧವಾದ ಕೈಂಕರ್ಯಗಳನ್ನೂ ಸ್ವೀಕರಿಸುತ್ತಾ ನಿತ್ಯನಿರತಿಶಯಾನನ್ದಯುಕ್ತನಾಗಿರುವುದು ಸರಿಯಷ್ಟೆ. ಹಾಗಿದ್ದರೂ ತನಗೆ ಶೇಷಭೂತರಾದ ಜೀವಾತ್ಮರುಗಳು ಈ ಲೀಲಾವಿಭೂತಿಯೆಂಬ ಭೂಲೋಕದಲ್ಲಿ ಸಂಸಾರ ಮಹಾಸಾಗರದಲ್ಲಿ ದುಃಖಪರಂಪರೆಗಳನ್ನನುಭವಿಸುತ್ತಾ ಕಷ್ಟಪಡುವುದನ್ನು ಕಂಡು ಮರುಗಿ ಇವರೂ ತನ್ನೊಡನೆ ನಿತ್ಯವಿಭೂತಿಯಲ್ಲಿ ಕೈಂಕರ್ಯಗಳನ್ನು ಮಾಡುವಂತೆ ಆಗಬೇಕೆಂದು ಕೃಪೆಯಿಂದ ಇವರ ಉದ್ಧಾರಕ್ಕಾಗುವ ಉಪಾಯವನ್ನು ಚಿಂತಿಸುತ್ತಾ ತಾನೇ ಈ ಭೂಲೋಕದಲ್ಲಿ ರಾಮ ಕೃಷ್ಣಾದಿ ಅವತಾರಗಳನ್ನು ಮಾಡಿ ಗೀತಾದಿ ಗ್ರಂಥಗಳ ಮೂಲಕ ಉಪದೇಶ ಮಾಡಿದನು. ಇದಲ್ಲದೆ ಪರಾಂಕುಶ ಪರಕಾಲಾದಿ ಭಗವದ್ಗುಣಾನುಭವೈಕ ನಿರತರಾದ ಆಳ್ವಾರುಗಳ ಮೂಲಕ "ದ್ರಾವಿಡವೇದ" ವೆಂಬ ನಾಲ್ಕು

ಸಾವಿರ ದಿವ್ಯ ಪ್ರಬನ್ಧಗಳನ್ನು ಪ್ರಚಾರಪಡಿಸಿದನು. ಕಾಲವೈಪರೀತ್ಯದಿಂದ ಇವುಗಳು ಖಿಲವಾಗುತ್ತಾ ಇರುವುದನ್ನು ಕಂಡು ಇವುಗಳ ಪುನರುದ್ಧಾರಕ್ಕಾಗಿ ಶ್ರೀಮನ್ನಾಥಮುನಿ, ಆಳವನ್ದಾರ್ ಮೊದಲಾದ ಆಚಾರ್ಯ ಪರಂಪರೆಯ ಮೂಲಕ ಉಪದೇಶಾದಿಗಳನ್ನು ಏರ್ಪಡಿಸಿದನು. ಪುನಃ ಈ ಚೇತನೋಜ್ಜೀವನಕಾರ್ಯವು ಅಭಿವೃದ್ಧಿಯಾಗಬೇಕೆಂಬ ಸಂಕಲ್ಪದಿಂದ ಶ್ರೀಮನ್ನಾರಾಯಣನು ತನ್ನ ಪರ್ಯಂಕಾದಿರೂಪನಾದ ಆದಿಶೇಷನನ್ನು ಈ ಭೂಲೋಕದಲ್ಲಿ ಅವತರಿಸಬೇಕೆಂದು ನಿಯಮಿಸಿದನು. ಈ ನಿಯಮವನ್ನು ಶಿರಸಾವಹಿಸಿದ ಆದಿಶೇಷನು ತೊಂಡಮಂಡಲದ ಕಾಂಚೀಪುರಕ್ಕೆ ಸಮೀಪದಲ್ಲಿರುವ "ಭೂತಪುರಿ" ಎಂದು ಪ್ರಸಿದ್ಧವಾದ "ಶ್ರೀ ಪೆರುಂಬೂದೂರ್" ಎಂಬ ದಿವ್ಯ ಕ್ಷೇತ್ರದಲ್ಲಿ ''ಶ್ರೀರಾಮಾನುಜ''ರಾಗಿ ಅವತರಿಸಿದನು.

ಶ್ರೀಪೆರುಂಬೂದೂರಿನಲ್ಲಿ ವಾಸವಾಗಿದ್ದ ಬ್ರಾಹ್ಮಣೋತ್ತಮರಾದ "ಆಸೂರಿ ಕೇಸವ ಸೋವಯಾಜಿ ಎಂಬ ಭಕ್ತರಿಗೆ ಶ್ರೀಯಾಮುನಾಚಾರ್ಯರ ಆಪ್ತಶಿಷ್ಯರಾದ (ತಿರುಮಲೈನಂಬಿ) "ಶ್ರೀಶೈಲಪೂರ್ಣ" ಎಂಬುವರ ಸೋದರಿ 'ಕಾಂತಿಮತಿ' ಎಂಬ ಕನ್ಯಾರತ್ನವು ಧರ್ಮಪತ್ನಿಯಾಗಿದ್ದಳು. ಬಹಳ ಕಾಲದವರೆಗೆ ಮಕ್ಕಳಿಲ್ಲದ ಈ ದಂಪತಿಗಳಿಗೆ ತಿರುವಲ್ಲಿಕ್ಕೇಣಿ ಶ್ರೀಪಾರ್ಥಸಾರಥಿಯವರ ಅನುಗ್ರಹದಿಂದ 963 ವರ್ಷಗಳ ಹಿಂದೆ ಪಿಂಗಳ ಸಂವತ್ಸರ ಮೇಷ ಶುಕ್ಲ ಪಂಚಮೀ ಆರ್ದ್ರಾ ನಕ್ಷತ್ರ ಕೂಡಿದ ಶುಭದಿನದಲ್ಲಿ (ಕ್ರಿ. ಶ. 1017) ದಿವ್ಯ ಪುತ್ರರತ್ನ ಜನನವಾಯಿತು. ಈ ಶಿಶುವನ್ನು ಆದಿಶೇಷನ ಅವತಾರವೆಂದು ಶ್ರೀಶೈಲಪೂರ್ಣರು ತಮ್ಮ ಸೋದರಳಿಯನಿಗೆ ಇಳೈಯಾಳ್ವಾರ್ (ರಾಮಾನುಜ, ಲಕ್ಷ್ಮಣ) ಎಂಬ ನಾಮಕರಣ ಮಾಡಿದರು. ಗರ್ಭಾಷ್ಟಮದಲ್ಲಿ ಇವರಿಗೆ ಉಪನಯನ ಸಂಸ್ಕಾರವಾಯಿತು. ಸಕಾಲದಲ್ಲಿ ಇವರು ಗ್ರಹಸ್ಥಾಶ್ರಮವನ್ನು ಸ್ವೀಕರಿಸಿದರು. ಹದಿನಾರುವರ್ಷ ವಯಸ್ಸಾಗುವವರೆಗೆ ತಮ್ಮ ತಂದೆಯವರಲ್ಲಿಯೇ ಶಾಸ್ತ್ರಾಭ್ಯಾಸ ಮಾಡುತ್ತಿದ್ದರು. ಕೆಲವು ಕಾಲದಲ್ಲಿಯೇ ಶ್ರೀರಾಮಾನುಜರಿಗೆ ಪಿತೃವಿಯೋಗವುಂಟಾಗಲು ಇವರು ಶ್ರೀಪೆರುಂಬೂದೂರನ್ನು ಬಿಟ್ಟು ಮುಂದಿನ ವಿದ್ಯಾಭ್ಯಾಸಕ್ಕಾಗಿ ಕಾಂಚೀಪುರವನ್ನು ಸೇರಿದರು.

ಅಲ್ಲಿದ್ದ ವಿದ್ವಾಂಸರಾದ ಯಾದವಪ್ರಕಾಶರ ಬಳಿ ವೇದಾನ್ತ ಶಾಸ್ತ್ರ

ವನ್ನು ಅಭ್ಯಾಸವಮಾಡುತ್ತಿದ್ದರು. ಶ್ರೀರಾಮಾನುಜರ ಚಿಕ್ಕಮ್ಮನ ಮಗ ಗೋವಿಂದಭಟ್ಟರೂ ಇವರ ಸಹಪಾಠಿಯಾಗಿ ಅದೇ ಗುರುಗಳಲ್ಲಿ ಶಿಷ್ಯರಾಗಿ ಸೇರಿದರು. ಈ ಗುರುಗಳಿಂದ ಉಪನಿಷದ್ವಾಕ್ಯಗಳಿಗೆ ಸಂಮಂಜಸವಾದ ಅರ್ಥ ವಿವರಣೆಯಾಗದ ಸಮಯಗಳಲ್ಲಿ ಶ್ರೀರಾಮಾನುಜರು ಕ್ಲೇಶಪಡುತ್ತಾ ಇದ್ದರು. ಕೆಲವು ವೇಳೆ ವಿಶಿಷ್ಟಾದ್ವೈತಪರವಾದ ವಿಶೇಷಾರ್ಥಗಳನ್ನು ವಿವರಿಸುತ್ತಿದ್ದರು. ಇದರಿಂದ ಅಸಮಾಧಾನಗೊಂಡ ಗುರುಗಳು ಕಾಶೀ ಯಾತ್ರೆಯ ನೆಪದಿಂದ ಶ್ರೀರಾಮಾನುಜರನ್ನು ಕೊಲ್ಲುವ ಯತ್ನಮಾಡಿದರು. ಪರಮದಯಾಳುವಾದ ಶ್ರೀ ಕಾಂಚೀವರದರಾಜನ ಸಹಾಯದಿಂದ ಸುರಕ್ಷಿತ ರಾಗಿ ರಾಮಾನುಜರು ಕಾಂಚೀಪುರಕ್ಕೆ ಹಿಂತಿರುಗಿದರು. ಅಲ್ಲಿ ಶ್ರೀ ವರದ ರಾಜರ ಅನ್ತರಂಗದ ಭಕ್ತರಾದ ಕಾಂಚೀಪೂರ್ಣರ (ತಿರುಕ್ಕಚ್ಚಿನಂಬಿ) ಸಲಹೆ ಯಂತೆ ಶ್ರೀ ವರದರಾಜನಿಗೆ ತಿರುಮಂಜನತೀರ್ಥಕೈಂಕರ್ಯದಲ್ಲಿ ನಿರತ ರಾದರು. ಯಾತ್ರೆಯಿಂದ ಹಿಂತಿರುಗಿದ ಯಾದವ ಪ್ರಕಾಶರು ಸ್ವಲ್ಪ ವಿಸ್ಮಯ ಪಟ್ಟರೂ, ಸವಿಮಾತುಗಳಿಂದ ರಾಮಾನುಜರನ್ನು ಪುನಃ ತಮ್ಮ ಬಳಿ ಪಾಠ ಪ್ರವಚನ ಮಾಡುವಂತೆ ಒಪ್ಪಿಸಿದರು.

ಈ ಸಮಯದಲ್ಲಿ ಶ್ರೀರಂಗ ಕ್ಷೇತ್ರದಲ್ಲಿ 'ವಿಶಿಷ್ಟಾದ್ವೈತ ಸಿದ್ಧಾಂತ' ಆಚಾರ್ಯ ಪೀಠವನ್ನಲಂಕರಿಸಿದ್ದ ಶ್ರೀಯಾಮುನಾಚಾರ್ಯರು ತಮ್ಮ ಶಿಷ್ಯರ ಮೂಲಕ ಕಾಂಚೀಪುರದಲ್ಲಿದ್ದ ಶ್ರೀರಾಮಾನುಜರ ಪ್ರತಿಭೆಯನ್ನೂ, ಮಹಿಮೆ ಯನ್ನೂ ಕೇಳಿ ತಾವಾಗಿಯೇ ಕಾಂಚೀಪುರಕ್ಕೆ ದಯಮಾಡಿಸಿ, ವಿದ್ಯಾಭ್ಯಾಸ ನಿರತರಾಗಿದ್ದ ವರ್ಚಸ್ವಿಯಾಗಿದ್ದ ರಾಮಾನುಜರನ್ನು ದೂರದಿಂದಲೇ ಕಟಾಕ್ಷಿಸಿ, ಅನುಗ್ರಹಿಸಿ, ಶ್ರೀ ವರದರಾಜನ ದರ್ಶನವನ್ನು ಮಾಡಿ ಮುಂದಕ್ಕೆ ಸಿದ್ಧಾನ್ತ ನಿರ್ಧಾರಣ ಧುರಂಧರರಾಗುವಂತೆ ಶ್ರೀರಾಮಾನುಜರನ್ನು ಅನು ಗ್ರಹಿಸಬೇಕೆಂದು ಪ್ರಾರ್ಥನೆಯನ್ನು ಸಲ್ಲಿಸಿ, ಶ್ರೀರಂಗಕ್ಕೆ ಹಿಂತಿರುಗಿದರು.

ಪ್ರ

ಹೀಗಿರುವಲ್ಲಿ ಕಾಂಚೀನಗರದ ಮಹಾರಾಜನ ಮಗಳಿಗೆ ಬ್ರಹ್ಮರಾಕ್ಷಸ ಬಾಧೆಯುಂಟಾಯಿತು. ಶ್ರೀರಾಮಾನುಜರ ಪ್ರಭಾವದಿಂದ ಅದು ನಿವಾರಣೆ ಯಾದಾಗ ಗುರುಗಳಾದ ಯಾದವ ಪ್ರಕಾಶರಿಗೆ ಇವರ ಮಹಿಮೆಯು ವ್ಯಕ್ತ

ವಾಯಿತು. ಕೆಲವು ಕಾಲದಲ್ಲಿಯೇ ಶ್ರೀರಾಮಾನುಜರು ಈ ಗುರುಗಳ ಶಿಷ್ಯವೃತ್ತಿಯಿಂದ ನಿವೃತ್ತರಾದರು. ಆಮೇಲೆ ರಾಮಾನುಜರು ಪುನಃ ತಿರುಕ್ಕಚ್ಚಿನಂಬಿಯವರನ್ನು ಆಶ್ರಯಿಸಿ ಅವರ ಸಲಹೆಯಂತೆ ಶ್ರೀವರದರಾಜನ ಸೇವೆಯಲ್ಲಿ ನಿರತರಾಗಿದ್ದರು.

ಶ್ರೀರಂಗಕ್ಷೇತ್ರದಲ್ಲಿ ಆಚಾರ್ಯರಾಗಿದ್ದ ಶ್ರೀಯಾಮುನಾಚಾರ್ಯರು ಈ ವೇಳೆಗೆ ವೃದ್ಧಾಪ್ಯದಿಂದ ಅಶಕ್ತರಾಗುತ್ತಿರಲು ಕಾಂಚೀಪುರದಿಂದ ಶ್ರೀರಾಮಾನುಜರನ್ನು ತಮ್ಮ ಬಳಿಗೆ ಕರೆಸಬೇಕೆಂಬ ಅಭಿಪ್ರಾಯದಿಂದ ತಮ್ಮ ಆಪ್ತ ಶಿಷ್ಯರಾದ ಪೆರಿಯನಂಬಿ (ಮಹಾಪೂರ್ಣ) ಯನ್ನು ಕಾಂಚಿಪುರಕ್ಕೆ ಕಳುಹಿಸಿದರು. ಶ್ರೀರಾಮಾನುಜರನ್ನು ಕರೆದುಕೊಂಡು ಇಬ್ಬರೂ ಶ್ರೀರಂಗಕ್ಕೆ ಬಂದು ಸೇರುವಷ್ಟರಲ್ಲಿ ಶ್ರೀಯಾಮುನಾಚಾರ್ಯರು ಪರಮಪದಿಸಿದ್ದರು. ಅವರ ಚರಮ ವಿಗ್ರಹಕ್ಕೆ ಕಾವೇರಿ ತೀರದಲ್ಲಿ ಸಂಸ್ಕಾರಗಳು ನಡೆಯಲಾರಂಭಿಸಿದ್ದವು. ಇದನ್ನರಿತು ಶ್ರೀರಾಮಾನುಜರು ಅತ್ಯಂತ ದುಃಖಿತರಾಗಿ ಆ ವಿಮಲಚರಮ ವಿಗ್ರಹವನ್ನು ದಂಡಂಸಮರ್ಪಿಸುತ್ತಿರುವಾಗ ಶ್ರೀಯಾಮುನ ಮುನಿಗಳ ಕೈಯಲ್ಲಿ ಮೂರು ಬೆರಳುಗಳು ಮಡಿಸಿಕೊಂಡಿರುವುದನ್ನು ಕಂಡರು. ಶ್ರೀ ಆಚಾರ್ಯರಿಗೆ ಮನಸ್ಸಿನಲ್ಲಿ ಏನೋ ಕೊರತೆಗಳಿದ್ದಿರಬಹುದೆಂದು ರಾಮಾನುಜರಿಗೆ ತೋರಲು ಅವರು ಶಿಷ್ಯರನ್ನು ಈ ವಿಷಯದಲ್ಲಿ ವಿಚಾರ ಮಾಡಿದರು. ಅನ್ತರಂಗ ಶಿಷ್ಯರು ಈ ರೀತಿ ತಿಳಿಸಿದರು : (೧) ಬ್ರಹ್ಮಸೂತ್ರಕ್ಕೆ ವಿಶಿಷ್ಟಾದ್ವೈತಪರವಾದ ಭಾಷ್ಯವನ್ನು ರಚಿಸಬೇಕೆಂದೂ (೨) ಶ್ರೀ ನಮ್ಮಾಳ್ವಾರ್‌ರವರ ತಿರುವಾಯ್ಮೊಳಿ ದಿವ್ಯಪ್ರಬನ್ಧಕ್ಕೆ ವಿಶದವಾಗಿ ವ್ಯಾಖ್ಯಾನಸಿದ್ಧವಾಗಬೇಕೆಂದೂ (೩) ಮಹರ್ಷಿಗಳಾದ ವ್ಯಾಸ, ಪರಾಶರರ ನಾಮಧೇಯಗಳು ಶಾಶ್ವತವಾಗಿರುವಂತೆ ಏರ್ಪಡಿಸಬೇಕೆಂದೂ ಶ್ರೀಯಾಮುನಾಚಾರ್ಯರು ಆಗಾಗ್ಗೆ ಹೇಳುತ್ತಿದ್ದುದರಿಂದ ಅವರ ಅನ್ತರಂಗದಲ್ಲಿ ಈ ಅಭಿಪ್ರಾಯಗಳಿದ್ದಿರಬಹುದು— ಎಂದರು. ಇದನ್ನು ಕೇಳಿದ ಮೇಲೆ ರಾಮಾನುಜರು "ಭಗವದನುಗ್ರಹ ವಿದ್ದರೆ ತಾವು ಈ ಕೊರತೆಗಳನ್ನು ತೀರಿಸುವುದಾಗಿ" ಪ್ರತಿಜ್ಞೆ ಮಾಡಲು ಆ ಮೂರು ಬೆರಳುಗಳು ಪೂರ್ವದಂತೆ ನೆಟ್ಟಗಾದವು ! ಈ ಆಶ್ಚರ್ಯವನ್ನು ಕಂಡ ಶಿಷ್ಯರು ರಾಮಾನುಜರು ಆಚಾರ್ಯರ ಅನ್ತರಂಗಕೃಪೆಗೆ ಪಾತ್ರರೆಂದೂ

ಮುಂದಕ್ಕೆ ಸಿದ್ಧಾನ್ತನಿರ್ವಾಹಕ್ಕೆ ಇವರೇ ಅರ್ಹರಾಗುತ್ತಾರೆಂದೂ ತೀರ್ಮಾನಿಸಿದರು. ಆದರೆ ರಾಮಾನುಜರು ಖಿನ್ನರಾಗಿ, ಶ್ರೀರಂಗನಾಥನನ್ನು ದರ್ಶನ ಮಾಡದೆಯೇ, ಕಾಂಚೀಪುರಕ್ಕೆ ಹಿಂತಿರುಗಿದರು.

ಕಾಂಚೀಪುರಕ್ಕೆ ಹಿಂತಿರುಗಿದ ಮೇಲೆ ರಾಮಾನುಜರಿಗೆ ಮುಂದಿನ ಕರ್ತವ್ಯದ ಮೇಲೆ ಚಿಂತೆಯುಂಟಾಗಲು, ತಮ್ಮ ಸಂಶಯಗಳಿಗೆ ಕಾಂಚೀ "ತೇವಪ್ಪೆರುಮಾಳ್" ಎಂಬ ಶ್ರೀ ವರದರಾಜರಿಂದಲೇ ಪರಿಹಾರವನ್ನು ಕೇಳಿ ತಿಳಿಯಬೇಕೆಂದು ಅಭಿಪ್ರಾಯಪಟ್ಟು ಸನ್ನಿಧಿಯ ಅನ್ತರಂಗ ಭಕ್ತರಾದ ತಿರುಕ್ಕಚ್ಚಿನಂಬಿಗಳಲ್ಲಿ ಈ ವಿವರವನ್ನು ವಿಜ್ಞಾಪಿಸಿದರು ಶ್ರೀ ವರದ ರಾಜನಿಂದ ನಂಬಿಗಳು, ಆರು ಅರ್ಥಗಳನ್ನರಿತು ರಾಮಾನುಜರಿಗೆ, ಅವುಗಳನ್ನು ವಿವರಿಸಿದರು :—(೧) ಶ್ರೀಮನ್ನಾರಾಯಣನೇ ಪರತತ್ವ (೨) ಜೀವ, ಈಶ್ವರಭೇದವು ಸಹಜವಾದದ್ದು (೩) ಮುಕ್ತಿಗೆ ಪ್ರಪತ್ತಿಯೇ ಉಪಾಯವು (೪) ಅನ್ತಿಮ ಸ್ಮೃತಿಯ ಅವಶ್ಯಕತೆ ಇಲ್ಲ (೫) ದೇಹಾವಸಾನವಾದ ಮೇಲೆ ಮೋಕ್ಷಪ್ರಾಪ್ತಿ (೬) ಮಹಾಪೂರ್ಣರೆಂಬ ಪೆರಿಯ ನಂಬಿಗಳನ್ನು ಆಚಾರ್ಯರಾಗಿ ಆಶ್ರಯಿಸತಕ್ಕದ್ದು. ಈ ಷಡರ್ಥಗಳನ್ನರಿತ ಮೇಲೆ ಶ್ರೀ ರಾಮಾನುಜರು ಪೆರಿಯನಂಬಿಗಳ ದರ್ಶನಕ್ಕಾಗಿ ಶ್ರೀರಂಗಕ್ಕೆ ಪ್ರಯಾಣ ಮಾಡಿದರು.

ಇದೇ ಸಮಯಕ್ಕೆ ಸರಿಯಾಗಿ ಪೆರಿಯ ನಂಬಿ ದಂಪತಿಗಳು ಶ್ರೀರಂಗದಿಂದ ಹೊರಟು ರಾಮಾನುಜರನ್ನು ಕಾಣಬೇಕೆಂದು ಕಾಂಚೀಪುರಕ್ಕೆ ಬರುತ್ತಿದ್ದರು ಇಬ್ಬರೂ ಮಧ್ಯಮಾರ್ಗದಲ್ಲಿ, ಮಧುರಾನ್ತಕ ಕ್ಷೇತ್ರದಲ್ಲಿ ಸಂಧಿಸಿದರು. ಆ ಕ್ಷೇತ್ರದಲ್ಲಿಯೇ ರಾಮಾನುಜರು ಪೆರಿಯ ನಂಬಿಗಳ ಶಿಷ್ಯರಾಗಿ ಪಂಚಸಂಸ್ಕಾರಗಳನ್ನು ಪಡೆದು ಶ್ರೀ ಆಳವನ್ದಾರ್ರವರ ಅನುಗ್ರಹಕ್ಕೆ ಪಾತ್ರರಾದರು. ಅಲ್ಲಿಂದ ಎಲ್ಲರೂ ಕಾಂಚೀ ನಗರಕ್ಕೆ ಬಂದು ನೆಲೆಸಿದರು. ಶ್ರೀ ನಂಬಿಗಳ ಬಳಿ ರಾಮಾನುಜರು ಕಾಲಕ್ಷೇಪಾದಿಗಳನ್ನು ನಡೆಸುತ್ತಿದ್ದರು. ಆದರೆ ಕೆಲವು ಕಾರಣಾಂತರಗಳಿಂದ ಈ ಏರ್ಪಾಡುಗಳು ಬಹಳ ಕಾಲ ನಡೆಯದೆ, ಶ್ರೀಮಹಾಪೂರ್ಣರು ಶ್ರೀರಂಗಕ್ಕೆ ಹಿಂತಿರುಗಬೇಕಾಯಿತು. ಆಚಾರ್ಯರ ವಿಶ್ಲೇಷಕ್ಕೆ ಕಾರಣಗಳಾದ ತಮ್ಮ ಪತ್ನಿಯಲ್ಲಿ

ಕೆಲವು ನ್ಯೂನತೆಗಳನ್ನು ಕಂಡ ರಾಮಾನುಜರು ಆಕೆಯನ್ನು ತೌರೂರಿಗೆ ಕಳಿಸಿ ಕಾಂಚೀಪುರದಲ್ಲಿಯೇ ಶ್ರೀ ದೇವರಾಜನಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸಿದರು ಇವರಿಗೆ "ಯತಿರಾಜ" ಎಂಬ ಹೆಸರನ್ನು ವರದರಾಜನೇ ಅನುಗ್ರಹಿಸಿದನು. ಆಶ್ರಮ ಸ್ವಿಕಾರವಾದ ಮೇಲೆ ಯತಿರಾಜರಿಗೆ ಕೂರೇಶ (ಕೂರತ್ತಾಳ್ವಾರ್) ಮತ್ತು ದಾಶರಥಿ (ಮುದಲಿಯಾಂಡಾರ್) ಎಂಬ ಇಬ್ಬರು ಆಪ್ತ ಶಿಷ್ಯರಾದರು. ಶ್ರೀ ಯತಿರಾಜರ ಪ್ರಭಾವವು ದಿನದಿನಕ್ಕೆ ಅಭಿವೃದ್ಧಿ ಯಾಗುತ್ತಿರಲು ಯಾದವ ಪ್ರಕಾಶರೂ ಭಗವತ್ಕಟಾಕ್ಷ ಪಾತ್ರರಾಗಿ, ಶ್ರೀ ರಾಮಾನುಜ ಮುನಿಗಳ ಶಿಷ್ಯನಾಗಿ ಸೇರಿ, 'ಗೋವಿಂದ ಜೀಯರ್' ಎಂಬ ಹೆಸರನ್ನು ಹೊಂದಿ, 'ಯತಿಧರ್ಮ ಸಮುಚ್ಚಯ' ಗ್ರಂಥವನ್ನು ರಚಿಸಿದರು.

ಶ್ರೀರಂಗಕ್ಕೆ ಹಿಂತಿರುಗಿದ ಮೇಲೆಯೂ ಪೆರಿಯನಂಬಿಗಳಿಗೆ ರಾಮಾನು ಜರಲ್ಲಿ ಆದರ ಕಡಿಮೆಯಾಗಲಿಲ್ಲ. ದರ್ಶನ ಪ್ರಚಾರಕ್ಕೆ ಯೋಗ್ಯರಾದವರು ಈ "ಯತಿರಾಜ ರಾಮಾನುಜ" ಮುನಿಗಳೇ ಎಂದು ನಿಶ್ಚಯಿಸಿ, ಅವರನ್ನು ಶ್ರೀರಂಗಕ್ಕೆ ಕರೆತರಿಸಬೇಕೆಂಬ ಅಭಿಪ್ರಾಯದಿಂದ ಶ್ರೀಯಾಮುನಾಚಾರ್ಯರ ಶಿಷ್ಯರಾದ "ತಿರುವಂಗ ಪ್ಪೆರುಮಾಳರೈಯರ್" (ವರರಂಗಗಾಯಕ) ಎಂಬ ಗಾಯಕ ಶಿಖಾಮಣಿಯನ್ನು ಕಾಂಚೀಪುರಕ್ಕೆ ಕಳುಹಿಸಿದರು. ತಮ್ಮ ದೇವಗಾನದಿಂದ ಶ್ರೀ ಕಾಂಚೀವರದರಾಜನನ್ನು 'ಅರೈಯ'ರ್ ತೃಪ್ತಿಪಡಿಸಿ ಯತಿರಾಜರನ್ನು ಶ್ರೀರಂಗಕ್ಕೆ ಕಳಿಸಿಕೊಡಬೇಕೆಂದು ಪ್ರಾರ್ಥಿಸಿದರು. ವರದ ರಾಜನಿಂದ ಅಪ್ಪಣೆ ಪಡೆದು ರಾಮಾನುಜರು ಅರೈಯರೊಡನೆ ಶ್ರೀರಂಗಕ್ಕೆ ಬಂದು ಸೇರಿದರು. ಅಲ್ಲಿ ಶ್ರೀರಂಗನಾಥನ ಅನುಗ್ರಹಕ್ಕೆ ಪಾತ್ರರಾಗಿ "ಉಡೈಯವರ್" (ವಿಭೂತಿದ್ವಯನಾಯಕ) ಎಂಬ ನಾಮಧೇಯವನ್ನು ಪಡೆದರು. ಶ್ರೀರಂಗಕ್ಷೇತ್ರದಲ್ಲಿ ಮಹಾಪೂರ್ಣರ ಸನ್ನಿಧಿಯಲ್ಲಿ ಗ್ರಂಥಕಾಲ ಕ್ಷೇಪಾದಿಗಳು ನಡೆಯುತ್ತಿದ್ದವು. ಶ್ರೀ ಯಾಮುನಾಚಾರ್ಯರ ಮತ್ತೊಬ್ಬ ಶಿಷ್ಯರಾದ ಗೋಷ್ಠೀ ಪೂರ್ಣ (ತಿರುಕ್ಕೋಟ್ಟಿಯೂರ್ ನಂಬಿ) ಎಂಬ ಮಹನೀ ಯರು ಅನೇಕ ಅರ್ಥ ವಿಶೇಷಗಳನ್ನು ಆಳವನ್ದಾರ್‌ರವರಿಂದ ಪಡೆದಿರುವುದ ರಿಂದ ಅವರಲ್ಲಿ ಈ ಅರ್ಥ ವಿಶೇಷಗಳನ್ನು ಕೇಳಿಬರುವಂತೆ ಮಹಾಪೂರ್ಣರು ನಿಯಮಿಸಲು, ರಾಮಾನುಜರು ಹದಿನೆಂಟು ಸಲ ಶ್ರೀರಂಗದಿಂದ ತಿರು ಕ್ಕೋಟ್ಟಿಯೂರಿಗೆ ನಡೆದು, ಗೋಷ್ಠಿಪೂರ್ಣರನ್ನು ತಮ್ಮ ಅಭಿಮುಖ್ಯದಿಂದ

ಒಲಿಸಿಕೊಂಡರು. ಕೊನೆಯ ಸಲ ಈ ಆಚಾರ್ಯರು ರಾಮಾನುಜರಿಗೆ ಗೀತಾ ಚರಮ ಶ್ಲೋಕದ ರಹಸ್ಯಾರ್ಥವನ್ನು ಉಪದೇಶಿಸಿ ಅದು ಅತ್ಯಂತಗೋಪ್ಯ ವೆಂದು ತಿಳಿಸಿದರು. ಈ ಅರ್ಥ ವಿಶೇಷವನ್ನರಿತ ರಾಮಾನುಜರು ಆಚಾರ್ಯರ ನಿಯಮದ ಉಲ್ಲಂಘನವಾದರೂ ಬಾಧಕವಿಲ್ಲವೆಂದು "ಸಕಲಚೇತನ ಉದ್ಧಾರವಾಗಲಿ" ಎಂಬ ವಿಶೇಷ ಕೃಪೆಯಿಂದ ಅಲ್ಲಿದ್ದ ಸಕಲ ಶ್ರೀವೈಷ್ಣ ವರಿಗೂ ಈ ರಹಸ್ಯಾರ್ಥವನ್ನು ಉಪದೇಶಿಸಿದರು. ಗೋಷ್ಠಿಪೂರ್ಣರು ರಾಮಾನುಜರ ಈ ಔದಾರ್ಯವನ್ನರಿತ ಮೇಲೆ ಇವರನ್ನು "ಎಂಬೆರುಮಾನಾ ರೆಂದೂ'' "ಕೃಪಾ ಮಾತ್ರಪ್ರಸನ್ನಾಚಾರ್ಯ"ರೆಂದೂ ಪ್ರಶಂಸಿದರು.

ಆ ಮೇಲೆ ರಾಮಾನುಜರು ''ತಿರುಮಲೈಯಾಂಡಾನ್" ಎಂಬ ಮಾಲಾಧರರ ಶಿಷ್ಯರಾಗಿ ಅವರಲ್ಲಿ ''ಶ್ರೀ ಭಗವದ್ವಿಷಯ ಎಂಬ ತಿರುವಾ ಯ್ಮೊೞಿದಿವ್ಯ ಪ್ರಬನ್ಧದ ವ್ಯಾಖ್ಯಾನವನ್ನು ಅರಿತರು. ''ತಿರುರಂಗಪ್ಪೆರು ಮಾಳರೈಯರ್" ಎಂಬ ''ವರರಂಗನಾಯಕ"ರಿಂದ ಮತ್ತೊಂದು ಅರ್ಥ ವಿಶೇಷವನ್ನು ತಿಳಿಯಬೇಕೆಂದು ಪೆರಿಯನಂಬಿಗಳು ರಾಮಾನುಜರಿಗೆ ನಿಯಮಿಸಲು ಅವರಿಂದ ''ಚರಮಪರ್ವನಿಷ್ಠೆ'' ಎಂಬ ಆಚಾರ್ಯಾಭಿಮಾನದ ವೈಲಕ್ಷಣವನ್ನು ಗ್ರಹಿಸಿದರು. ಹೀಗೆ ಉಭಯ ವೇದಾನ್ತಗಳನ್ನೂ ರಹಸ್ಯ ಅರ್ಥಗಳನ್ನೂ ಅರಿತ ರಾಮಾನುಜರು ಶ್ರೀರಂಗಕ್ಷೇತ್ರದಲ್ಲಿ ಕಾಲಕ್ಷೇಪಾದಿ ಗಳನ್ನು ನಡೆಸುತ್ತಾ ಶ್ರೀರಂಗನಾಥನ ಕೈಂಕರ್ಯಗಳಲ್ಲಿ ನಿರತರಾಗಿರುತ್ತಿದ್ದರು. ತಿರುಪತಿ ಶ್ರೀ ಶ್ರೀನಿವಾಸದೇವರ ''ತಿರುವೇಂಗಡಮುಡೈಯರ್" ಕೈಂಕರ್ಯವು ಪರಮಪ್ರಾಪ್ಯವೆಂದು ತಿಳಿದವರಾಗಿ ತಮ್ಮ ಶಿಷ್ಯರಾದ ಶ್ರೀ ಅನನ್ತಾಳ್ವಾರ್ ಎಂಬ ಮಹನೀಯರನ್ನು ಶ್ರೀವೆಂಕಟೇಶನ ಪುಷ್ಪಕೈಂಕರ್ಯಕ್ಕೆ ನಿಯಮಿಸಿದರು.

ಕೊಂಚ ಕಾಲಾನಂತರ ರಾಮಾನುಜರು ದಿವ್ಯದೇಶಗಳ ಮಂಗಳಾಶಾಶನಕ್ಕಾಗಿ ಯಾತ್ರೆ ಹೊರಟರು. ಕಾಂಚೀಪುರದ ಮಾರ್ಗ ವಾಗಿ ತಿರುಪತಿಗೆ ಬಂದು ಸೇರಿದರು. ಅಲ್ಲಿ ತಿರುಪತಿ ಬೆಟ್ಟದ ತಪ್ಪಲಿನಲ್ಲಿ ತಮ್ಮ ಸೋದರ ಮಾವನವರಾದ ಪೆರಿಯತಿರುಮಲೈ ನಂಬಿ (ಶ್ರೀಶೈಲ ಪೂರ್ಣ) ಯವರ ಅನುಗ್ರಹಕ್ಕೆ ಪಾತ್ರರಾಗಿ ತಿರುವೇಂಗಡಮುಡೈಯರ್ ದಿವ್ಯ ಸೇವೆಯನ್ನು ಮಾಡಿ ಕೃತಾರ್ಥರಾದರು. ತಿರುಮಲೈ ಶ್ರೀ ಶ್ರೀನಿವಾಸ

ದೇವರ ಮೂರ್ತಿಯ ವಿಷಯದಲ್ಲಿ ಸಂದೇಹವುಂಟಾಗಿರಲು ಶ್ರೀರಾಮಾನುಜರು ಪ್ರಾರ್ಥನೆಯನ್ನು ಸಲ್ಲಿಸಿದಾಗ ವಿಷ್ಣುವಿಗೆ ಅಸಾಧಾರಣವಾದ ಶಂಖ ಚಕ್ರಗಳೊಡನೆ ಮೂರ್ತಿಯು ಸರ್ವರಿಗೂ ದರ್ಶನಕೊಡಲಾಗಿ ಶ್ರೀ ವೈಷ್ಣವ ಕ್ಷೇತ್ರವೆಂದು ನಿರ್ಧರಿಸಲ್ಪಟ್ಟಿತು. ಈ ಐತಿಹ್ಯಕ್ಕಾಗಿ ಶ್ರೀ ರಾಮಾನುಜರಿಗೆ "ಅಪ್ಪನುಕ್ಕುಚಂಗಾಳಿ ಇಟ್ಟವರ್'' ಎಂದೂ ಪ್ರಸಿದ್ಧಿಯುಂಟು. ಅಲ್ಲಿ ಒಂದು ವರ್ಷಕಾಲವಿರುತ್ತಾ ಶ್ರೀಶೈಲಪೂರ್ಣರಲ್ಲಿ ಶ್ರೀ ರಾಮಾಯಣ ಕಾಲಕ್ಷೇಪವನ್ನು ನಡೆಸಿ ಅನೇಕ ವಿಶೇಷಾರ್ಥಗಳನ್ನು ಸಂಗ್ರಹಿಸಿದರು. ಈ ಮಧ್ಯೆ, ಕಾಳಹಸ್ತಿಯಲ್ಲಿ ಶಿವಭಕ್ತನಾಗಿದ್ದ ಗೋವಿಂದಭಟ್ಟರನ್ನು ಶ್ರೀಶೈಲಪೂರ್ಣರು ಕಟಾಕ್ಷಿಸಿ ಶ್ರೀವೈಷ್ಣವನನ್ನಾಗಿ ಪರಿವರ್ತಿಸಿ ತಮ್ಮ ಶಿಷ್ಯನಾಗಿ ಸ್ವೀಕರಿಸಿದ್ದರು ಇವರು ವಿರಕ್ತರಾಗಿ ಸನ್ಯಾಸವನ್ನು ಸ್ವೀಕರಿಸಿ ''ಎಂಬಾರ್'' ಎಂಬ ಹೆಸರಿನಿಂದ ''ರಾಮಾನುಜ ಪದಚ್ಛಾಯಾ'' ಎಂದು ಬೆಳಗುತ್ತಿದ್ದರು. ಶ್ರೀರಾಮಾನುಜರು ತಿರುಪತಿಕ್ಷೇತ್ರದಿಂದ ಶಿಷ್ಯರೊಡನೆ ಶ್ರೀರಂಗಕ್ಕೆ ಹಿಂತಿರುಗಿ ಶ್ರೀರಂಗನಾಥನ ಕೈಂಕರ್ಯದಲ್ಲೂ ಕಾಲಕ್ಷೇಪಾದಿಗಳಲ್ಲೂ ನಿರತರಾಗಿರುತ್ತಿದ್ದರು.

ಶ್ರೀ ರಾಮಾನುಜಚಾರ್ಯರು ಪೆರಿಯ ನಂಬಿ (ಮಹಾಪೂರ್ಣ), ತಿರುಕ್ಕೋಟ್ಟಿಯೂರ್ ನಂಬಿ (ಗೋಷ್ಠೀಪೂರ್ಣ). ತಿರುಮಲೈಯಾಂಡಾರ್ (ಮಾಲಾಧರ). ಪೆರಿಯತಿರುಮಲೈ ನಂಬಿ (ಶ್ರೀಶೈಲ ಪೂರ್ಣ) ಮತ್ತು ತಿರುವರಂಗ ಪ್ಪೆರುಮಾಳರೈಯರ್ (ವರರಂಗನಾಯಕ) ಎಂಬ ಐದ ಆಚಾರ್ಯವರ್ಯರಿಂದ ಉಪದೇಶಗಳನ್ನು ಪಡೆದರು. ಹೀಗೆ ಪಂಚ ಆಚಾರ್ಯರನ್ನು ಆಶ್ರಯಿಸಿದ್ದರಿಂದ ಯತಿರಾಜರಿಗೆ "ಪಂಚಾಚಾರ್ಯಪದಾಶ್ರಯ''ರೆಂಬ ಹೆಸರು ಪ್ರಖ್ಯಾತವಾಗಿದೆ.

ಶ್ರೀರಂಗಕ್ಷೇತ್ರ ವಾಸವು ಹೀಗೆಯೇ ನಡೆಯುತ್ತಿರಲು ರಾಮಾನುಜರಿಗೆ ಹಿಂದೆ ತಾವು ಶ್ರೀಯಾಮುನಾಚಾರ್ಯರ ಅನ್ತಿಮ ಕಾಲದಲ್ಲಿ ಮಾಡಿದ್ದ ಪ್ರತಿಜ್ಞೆಗಳನ್ನು ನೆರವೇರಿಸಬೇಕೆಂಬ ಸಂಕಲ್ಪವುಂಟಾಯಿತು. ಬ್ರಹ್ಮಸೂತ್ರ ಭಾಷ್ಯವನ್ನು ರಚಿಸಲು ಬೋಧಾಯನ ವೃತ್ತಿಗ್ರಂಥವನ್ನು ಪರಿಶೀಲಿಸಲು ರಾಮಾನುಜರು ತಮ್ಮ ಶಿಷ್ಯರಾದ ಕೂರತ್ತಾಳ್ವಾರ್ ಜೊತೆಯಲ್ಲಿ ಕಾಶ್ಮೀರದ

ಶಾರದಾ ಪೀಠಕ್ಕೆ ಪ್ರಯಾಣ ಮಾಡಿದರು. ಅಲ್ಲಿ ಏಕಸಂಧಿಗ್ರಾಹಿಯೊದ ಕೂರೇಶರು ವೃತ್ತಿಗ್ರಂಥವನ್ನು ಆಮೂಲಾಗ್ರವಾಗಿ ಪರಿಶೀಲಿಸಿದ ಮೇಲೆ ಶ್ರೀರಂಗಕ್ಕೆ ಹಿಂತಿರುಗಿದರು. ಶ್ರೀರಂಗದಲ್ಲಿ ನೆಲೆಸಿ ಶ್ರೀಭಾಷ್ಯವನ್ನು ಕೂರೇಶರ ಸಹಾಯದಿಂದ ಬರೆಯಿಸಿ ಕೃತಕೃತ್ಯರಾದರು. ಇದಕ್ಕೆ ಸಂಗ್ರಹ ರೂಪವಾಗಿ ವೇದಾನ್ತ ಸಾರ, ವೇದಾನ್ತ ದೀಪ ಎಂಬ ಎರಡು ಗ್ರಂಥಗಳು ಸಿದ್ಧವಾದವು.

ದರ್ಶನ ಸ್ಥಾಪನ ಕಾರ್ಯವು ಈ ರೀತಿ ನಡೆದು ಬರುತ್ತಿರಲು ಅಖಿಲ ಭಾರತ ಯಾತ್ರೆಯನ್ನು ಕೈಕೊಂಡು ಎಲ್ಲಾ ದಿವ್ಯ ಕ್ಷೇತ್ರಗಳನ್ನೂ ದರ್ಶನ ಮಾಡುತ್ತಾ ದೇವಾಲಯಗಳಲ್ಲೆಲ್ಲಾ ಭಗವದಾರಾಧನ ಉತ್ಸವಾದಿಗಳು ಆಗಮರೀತ್ಯಾ ನಡೆಯುವಂತೆ ಪರಿಷ್ಕರಿಸಿ ಶ್ರೀವೈಷ್ಣವ ಅಗ್ರಹಾರಗಳನ್ನು ಏರ್ಪಡಿಸುತ್ತಾ ಜ್ಞಾನೋಪದೇಶವನ್ನು ಮಾಡುತ್ತಾ ಪ್ರಚಾರಕಾರ್ಯವನ್ನು ನಡೆಸುತ್ತಾ ಬಂದರು. ಹಾಗೆಯೇ ಪ್ರಯಾಣಮಾಡುತ್ತಾ ಉತ್ತರ ದೇಶದ ಕ್ಷೇತ್ರಗಳಾದ ಅಯೋಧ್ಯಾ, ಮಧುರಾ, ಪುಷ್ಕರ, ಬದರಿ, ನೈಮಿಶಾರಣ್ಯಾದಿ ದಿವ್ಯ ಕ್ಷೇತ್ರಗಳ ಮಂಗಳಾಶಾಸನಮಾಡುತ್ತಾ ಪುನಃ ಕಾಶ್ಮೀರದ ಶಾರದಾ ಪೀಠಕ್ಕೆ ದರ್ಶನವಿತ್ತಾಗ ಅಲ್ಲಿ ಶ್ರೀಶಾರದಾ ದೇವಿಯೇ ರಾಮಾನುಜರ ಶ್ರೀಭಾಷ್ಯವನ್ನು ಆದರಿಸಿ ಗೌರವಿಸಿ ಅವರಿಗೆ 'ಶ್ರೀ ಭಾಷ್ಯಕಾರ' ರೆಂಬ ಬಿರು ದನ್ನಿತ್ತಳು. ಅಲ್ಲಿಂದ ಯಥಾಕ್ರಮದಲ್ಲಿ ಸಂಚರಿಸುತ್ತಾ ಹಿಂತಿರುಗಿ ಶ್ರೀರಂಗ ಕ್ಷೇತ್ರಕ್ಕೆ ಬಂದು ರಾಮಾನುಜರು ಶ್ರೀರಂಗನಾಥನ ಕೈಂಕರ್ಯಗಳನ್ನು ನಿರ್ವಹಿಸುತ್ತಿದ್ದರು.

ಆ ಸಮಯದಲ್ಲಿ ಆ ದೇಶದ ರಾಜನಾದ ಚೋಳರಾಜನು ಶೈವ ಪಂಥಾನುಯಾಯಿಯಾಗಿದ್ದು ಇತರರಿಗೆ ತೊಂದರೆ ಕೊಡುತ್ತಿದ್ದುದರಿಂದ, ಅವನ ಉಪದ್ರವವನ್ನು ಸಹಿಸಲಾರದೆ ಶ್ರೀರಾಮಾನುಜರು ಗುಪ್ತ ವೇಷದಲ್ಲಿ ಶ್ರೀರಂಗದಿಂದ ಹೊರಟು ಕಾವೇರೀ ನದೀ ತೀರದಲ್ಲಿಯೇ ಸಂಚರಿಸುತ್ತಾ ಸತ್ಯ ಮಂಗಲದ ಮಾರ್ಗವಾಗಿ ಮೈಸೂರು ದೇಶದ ಸಾಲಿಗ್ರಾಮಕ್ಕೆ ಬಂದು ಸೇರಿದರು. ಅಲ್ಲಿಯ ಪುಷ್ಕರಣಿಯಲ್ಲಿ ಶ್ರೀಪಾದ ತೀರ್ಥ ಪ್ರಸಾದಿಸಿದ ಕಾರಣ ಅಲ್ಲಿಯ ಪುಷ್ಕರಣಿಗೆ 'ತೀರ್ಥ ಪುಷ್ಕರಣಿ' ಎಂದು ಹೆಸರಾಯಿತು, ಅಲ್ಲಿಂದ

ತೊಂಡನೂರಿಗೆ ಹೋಗಿ ಅರಸನಾಗಿದ್ದ ಹೊಯ್ಸಳ ಬಿಟ್ಟಿ ದೇವರಾಯನೆಂಬ ದೊರೆಯಿಂದ ಸಮ್ಮಾನಿತರಾಗಿ ಅವನನ್ನು ಶಿಷ್ಯನನ್ನಾಗಿ ಸ್ವೀಕರಿಸಿ ವೈಷ್ಣವ ನನ್ನಾಗಿ ಪರಿವರ್ತಿಸಿ 'ವಿಷ್ಣುವರ್ಧನ'ನೆಂಬ ಹೆಸರನ್ನಿಟ್ಟರು. ರಾಜಮರ್ಯಾದೆ ಗಳನ್ನು ಸ್ವೀಕರಿಸಿ ತೊಂಡನೂರಿನಲ್ಲಿ ಇರುತ್ತಿರಲು ಆ ಊರಿನ ಹತ್ತಿರ ದಲ್ಲಿಯೇ ಗೋಮಂತಪರ್ವತಕ್ಕೆ ಸೇರಿದ ಯದುಗಿರಿ (ಮೇಲುಕೋಟೆ) ಎಂಬ ಕ್ಷೇತ್ರದಲ್ಲಿ ಶ್ರೀ ನಾರಾಯಣ ದೇವರು ನೆಲೆಸಿರುವುದಾಗಿಯೂ ಊರ್ಧ್ವ ಪುಂಡ್ರಕ್ಕೆ ಅಗತ್ಯವಾದ ಶ್ವೇತಮೃತ್ತಿಕೆ (ಬಿಳಿಯಮಣ್ಣು) ಇರುವುದಾಗಿಯೂ ಸ್ವಪ್ನ ಮುಖೇನ ತಿಳಿದು ಅಲ್ಲಿಗೆ ದಯಮಾಡಿಸಿದರು. ಶ್ವೇತ ಮೃತ್ತಿಕೆ ಯನ್ನು ಸ್ವೀಕರಿಸಿ ಅಲ್ಲಿ ಹುತ್ತದಲ್ಲಿ ಅಡಗಿದ್ದ ದಿವ್ಯಮೂರ್ತಿಯನ್ನು ಸಂದರ್ಶಿಸಿ ಆ ರಾಜನ ಸಹಾಯದಿಂದ (ಶ್ರೀ ಯಾದವಗಿರಿ) 'ತಿರುನಾರಾ ಯಣ ಪುರ' ಕ್ಷೇತ್ರವನ್ನು ಜೀರ್ಣೋದ್ಧಾರ ಮಾಡಿದರು.

ಅಲ್ಲಿಯ ದಿವ್ಯಮೂರ್ತಿಯನ್ನು ದರ್ಶನಮಾಡಿದಾಗ ನಮ್ಮಾಳ್ವಾರ್‌ರವರು ತಮ್ಮ ತಿರುವಾಯ್ಮೊಳಿ ದಿವ್ಯಪ್ರಬನ್ಧದಲ್ಲಿ ೪ನೇ ಶತಕದ ಆರಂಭದಲ್ಲಿ ಅನು ಸನ್ಧಾನಮಾಡಿರುವ "ತಿರುನಾರಾಯಣ ಪ್ಪೆರುಮಾಳ್" ಇವರೇ ಎಂದು ಅರಿತ ಶ್ರೀರಾಮಾನುಜರು "ಒರ ನಾಯಹಂ" ಎಂಬ ಈ ದಶಕವನ್ನು ಈ ಕ್ಷೇತ್ರಕ್ಕೆ ಅನ್ವಯಿಸತಕ್ಕದ್ದೆಂದು ಸಮರ್ಪಿಸಿ ಮಂಗಳಶಾಸನಮಾಡಿದರು. ದಿಲ್ಲಿ ಪ್ರಾಂತ್ಯದಿಂದ ಉತ್ಸವಮೂರ್ತಿಯಾದ ಶೆಲ್ವಪಿಳ್ಳೈ (ರಾಮಪ್ರಿಯ) ಯನ್ನು ಬಿಜಯಮಾಡಿಕೊಂಡು ಬಂದು ಪ್ರತಿಷ್ಠಾದಿ ಕಾರ್ಯಗಳನ್ನು ಸಾಂಗ ವಾಗಿ ನೆರವೇರಿಸಿದರು. ಈ ಪ್ರತಿಷ್ಠಾಕಾರ್ಯವು ಬಹುಧಾನ್ಯ ಸಂ॥ ಪೆಂಗುನಿ ಮಾಸದ ಪುನರ್ವಸು ನಕ್ಷತ್ರದಲ್ಲಿ ವೈಭವದಿಂದ ನಡೆಯಿತು. ಸನ್ನಿಧಿಯ ಕೈಂಕರ್ಯಗಳು ಪಾಂಚರಾತ್ರ ಆಗಮ ರೀತ್ಯಾ ಕ್ರಮವಾಗಿ ನಡೆಯುವಂತೆ ಏರ್ಪಡಿಸಿ ವೇದ, ದರ್ಭಾದಿ ಅಷ್ಟತೀರ್ಥಗಳಿಂದಲೂ ಪವಿತ್ರವಾದ ಕಲ್ಯಾಣೀ ಪುಷ್ಕರಣಿಯಿಂದಲೂ ಕೂಡಿ ಮನೋಹರವಾದ ಈ ಕ್ಷೇತ್ರದಲ್ಲಿ ಹನ್ನೆರಡು ವರ್ಷಕಾಲ ತಾವೂ ಶ್ರೀ ಚೆಲುವನಾರಾಯಣನ ಕೈಂಕರ್ಯಪರರಾಗಿರುತ್ತಾ ದರ್ಶನ ಪ್ರಚಾರ ಕಾರ್ಯವನ್ನು ನಡೆಸುತ್ತಿದ್ದರು. ಇವರೇ ಬೇಲೂರು, ಗದಗು, ತೊಂಡನೂರು, ತಲಕಾಡುಗಳಲ್ಲಿಯೂ ಶ್ರೀ ನಾರಾಯಣನ

ಅರ್ಚಾಮೂರ್ತಿಗಳನ್ನು ಪ್ರತಿಷ್ಠೆಮಾಡಿಸಿ ವಿಜಯ ನಾರಾಯಣ, ವೀರ ನಾರಾಯಣ, ನಂಬಿ ನಾರಾಯಣ, ಕೀರ್ತಿನಾರಾಯಣರೆಂಬ ನಾಮಧೇಯ ಗಳಿಂದ ಪೂಜಾದಿಗಳು ಅವಿಚ್ಛಿನ್ನವಾಗಿ ನಡೆಯುವಂತೆ ಏರ್ಪಡಿಸಿದರು.

ತಿರುನಾರಾಯಣಪುರದಲ್ಲಿ ರಾಮಾನುಜಾಚಾರ್ಯರು ವಾಸಮಾಡುತ್ತಿರು ವಾಗ್ಗೆ ಶ್ರೀರಂಗಕ್ಷೇತ್ರಕ್ಕೆ ಚೋಳರಾಜನ ಬಾಧೆಯು ನಿವೃತ್ತಿಯಾಯಿತೆಂದು ತಿಳಿದು ಬರಲು ಶ್ರೀ ಭಾಷ್ಯಕಾರರು ಶ್ರೀರಂಗನಾಥನ ಕೈಂಕರ್ಯಕ್ಕೆ ಹಿಂತಿರು ಗಲು ಏರ್ಪಡಿಸಿದರು. ಆ ಸಮಯದಲಿ ಅಲ್ಲಿಯ ಶಿಷ್ಯರಿಂದ ಪ್ರಾರ್ಥಿತರಾಗಿ ನಿತ್ಯಗ್ರಂಥವೆಂಬ ಶ್ರೀ ಭಗವದಾರಾಧನದ ಕೈಪಿಡಿಯನ್ನು ಅನುಗ್ರಹಿಸಿ ಅವರ ಪ್ರಾರ್ಥನೆಯಂತೆ ತಮ್ಮ ಶಕ್ತಿಯಿಂದ ಒಂದು ದಿವ್ಯ ಮಂಗಳ ವಿಗ್ರಹ "ತಾಮುಹಂದ ತಿರುಮೇನಿ" ಅರ್ಚಾಮೂರ್ತಿಯನ್ನು ಮಾಡಿಸಿಕೊಟ್ಟು ಅದರಲ್ಲಿ ತಮ್ಮ ನಿತ್ಯಸಾನ್ನಿಧ್ಯವು ಇರುವುದಾಗಿ ತಿಳಿಸಿ ಅನುಗ್ರಹಿಸಿದರು. ಶ್ರೀರಂಗ ಕ್ಷೇತ್ರವನ್ನು ಸೇರಲು ಅಲ್ಲಿ ವೃದ್ಧರಾದ ಕೂರೇಶರೊಡನೆ ಸೇರಿ ಸಂತೋಷಿಸಿದರು ಕೂರೇಶರಿಗೆ ಭಗವದನುಗ್ರಹದಿಂದ ಇಬ್ಬರು ಕುಮಾರರು ಜನಿಸಲು ಅವರಿಗೆ ರಾಮಾನುಜರು ವ್ಯಾಸಭಟ್ಟರ್ (ಶ್ರೀರಾಮಪಿಳ್ಳೈ) ಪರಾಶರಭಟ್ಟರ್ ಎಂದು ನಾಮಕರಣಮಾಡಿ ವ್ಯಾಸ, ಪರಾಶರ ಮಹರ್ಷಿಗಳ ಹೆಸರುಗಳು ಶಾಶ್ವತವಾಗಿರುವಂತೆ ಮಾಡಿದರು. ಪರಾಶರಭಟ್ಟರ ಪ್ರಶಿಷ್ಯ ರಾದ "ನಂಬಿಳ್ಳೈ" ಎಂಬ ಲೋಕಾಚಾರ್ಯರಿಂದ ತಿರುವಾಯ್ಮೊಳಿ ದಿವ್ಯ ಪ್ರಬನ್ಧಕ್ಕೆ "ಡುಮುಪ್ಪತ್ತಾರಾಯಿರಪ್ಪಡಿ" ಎಂಬ ಮಹಾವ್ಯಾಖ್ಯಾನವು ಅವರಿಸಿತು. 'ಈ ಡುಂ ಮು ಪ್ಪ ತ್ತಾ ರಾ ಯಿ ರ ಪ್ಪ ಡಿ' ಕಾಲಕ್ಷೇಪವು ನಾಲೂರಾಚ್ಚಾರ್ಪಿಳ್ಳೈ ಎಬ ಮಹಾತ್ಮರಿಂದ 'ಜ್ಞಾನ ಮಂಟಪ'ವೆಂಬ ತಿರುನಾರಾಯಣಪುರದಲ್ಲಿ ವೈಭದೊಡನೆ ನಡೆಯಿತು. ಶ್ರೀರಂಗಕ್ಕೆ ದಯಮಾಡಿಸಿದ ಕೆಲವು ಕಾಲಾನಂತರ ರಾಮಾನುಜರು ಚಿದಂಬರದಲ್ಲಿದ್ದ ಗೋವಿಂದರಾಜನ ವಿಗ್ರಹವನ್ನು ಕೆಳಗಿನ ತಿರುಪತಿಯಲ್ಲಿ ಪ್ರತಿಷ್ಠೆ ಮಾಡಿಸಿ ದರು. ಶ್ರೀರಂಗದಲ್ಲಿ ಕಾಲಕ್ಷೇಪಗಳು ನಡೆಯುತ್ತಿರುವಾಗ್ಗೆ ಗೋದಾ ದೇವಿಯ ನಾಚ್ಚಿಯಾರ್ ತಿರುಮೊಳಿ ಕಾಲಕ್ಷೇಪ ಸಮಯದಲ್ಲಿ ತಿರುಮಾ ಲಿರಂ ಶೋಲೈ ಕ್ಷೇತ್ರದಲ್ಲಿ ಬಿಜಯಮಾಡಿಸಿರುವ 'ಶ್ರೀ ಅಳಹರ್' ಮಂಗಳಾ

ಶಾಸನಪರವಾದ ಒಂಭತ್ತನೇ ತಿರುವೊಳಿ (ಗೀತೆ) ಯಲ್ಲಿ (ಆಂಡಾಳ್) ಗೋದಾದೇವಿಯು 'ನೂರುತಡಾನಿರೈಸ್ಸ ಅಕ್ಕಾರವಡಿಶಿಲ್ ಶೋನ್ನೇನ್' ಎಂಬ ಪಾಶುರದಲ್ಲಿ ಸುಂದರ ಬಾಹುವಿಗೆ ನಿವೇದನಕ್ಕೆ 'ಅಕ್ಕಾರವಡಿಶಿಲ್' ಸಮರ್ಪಿಸಲು ತನಗೆ ಆಗಲಿಲ್ಲವೆಂಬ ಕೊರತೆಯು ಇತ್ತೆಂದು ಶ್ರೀರಾಮಾನುಜರಿಗೆ ಅಭಿಪ್ರಾಯವುಂಟಾಯಿತು. ಕೂಡಲೆ ಅವರು ತಮ್ಮ ಮಹಾನಸಿಕರಾದ 'ಕಿಡಾಂಬಿ ಆಚ್ಚಾನ್' ಎಂಬುವರನ್ನು 'ವನಗಿರಿ'ಗೆ ಕಳುಹಿಸಿ ಅಲ್ಲಿ ನೂರುತಡಾ ಅಕ್ಕಾರ ವಡಿಶಲ್ (ಕ್ಷೀರಾನ್ನ) ಸಿದ್ಧಪಡಿಸಿ ಸಮರ್ಪಿಸುವಂತೆ ಏರ್ಪಡಿಸಿದರು. ಕೊಂಚ ಕಾಲದ ಮೇಲೆ ಶ್ರೀ ಯತಿರಾಜ ರಾಮಾನುಜರು ಶ್ರೀ ವಿಲ್ಲಿ ಪುತ್ತೂರಿಗೆ ದಯಮಾಡಿಸಿ ಆಂಡಾಳ್ ಸಂದರ್ಶನಕ್ಕೆ ಬಂದಾಗ ಗೋದಾದೇವಿಯು ಮಂದಹಾಸವನ್ನು ಬೀರುತ್ತಾ ಅರ್ಚಾ ಸಮಾಧಿಯ ಮರ್ಯಾದೆಯನ್ನು ಮೀರಿ 'ನಮ್ ಕೋಯಿಲ್ ಅಣ್ಣರೇ !'—ಶ್ರೀರಂಗದಲ್ಲಿ ವಾಸಮಾಡುತ್ತಿರುವ ನಮ್ಮ ಅಣ್ಣನವರೇ ! — ದಯಮಾಡಿಸಬೇಕೆಂದು ಕರೆದು ಸನ್ಮಾನಿಸಿದ ಐತಿಹ್ಯವಿರುತ್ತದೆ. ಇದರಿಂದ ರಾಮಾನುಜಾಚಾರ್ಯರಿಗೆ 'ಗೋದಾಭೀಷ್ಟ ಪ್ರಪೂರಕ,' 'ಗೋದಾಗ್ರಜ ಎಂಬ ಹೆಸರುಗಳುಂಟಾದವು.

ಶ್ರೀರಾಮಾನುಜರು ಮಂಗಳಾಶಾಸನ ಮಾಡಿದ ದಿವ್ಯಕ್ಷೇತ್ರಗಳಲ್ಲಿ ಪ್ರಧಾನವಾದ ಮತ್ತು ಶ್ರೇಷ್ಠವೆಂದು ಪರಿಗಣಿಸಲ್ಪಟ್ಟ ನಾಲ್ಕು ದಿವ್ಯದೇಶಗಳನ್ನು ತಾವೇ ಈ ಕೆಳಗಿನ ಶ್ಲೋಕದಲ್ಲಿ ವಿವರಿಸಿದ್ದಾರೆ.

ಶ್ರೀರಂಗಮಂಗಳಮಣಿಂ ಕರುಣಾನಿವಾಸಂ
ಶ್ರೀ ವೆಂಕಟಾದ್ರಿ ಶಿಖರಾಲಯ ಕಾಳಮೇಘಂ ।
ಶ್ರೀ ಹಸ್ತಿಶೈಲಶಿಖರೋಜ್ವಲ ಪಾರಿಜಾತಂ
ಶ್ರೀಶಂ ನಮಾಮಿ ಶಿರಸಾ ಯದುಶೈಲದೀಪಂ ॥

ಶ್ರೀ ರಾಮಾನುಜರ ವಿಷಯದಲ್ಲಿ ರಚಿತವಾಗಿರುವ ಅನೇಕ ಸ್ತೋತ್ರಗಳಲ್ಲಿ 'ತಿರುವರಂಗತ್ತಮುದನಾರ್' ಎಂಬ ಮಹನೀಯರು ರಚಿಸಿರುವ (108 ಪಾಶುರಗಳನ್ನೊಳಗೊಂಡ) "ಇರಾಮಾನುಜ'' ನೂತ್ತಂದಾದಿಯು "ಪ್ರಪನ್ನ ಗಾಯತ್ರೀ" ಎಂದು ಪ್ರಸಿದ್ಧವಾಗಿದೆ. 'ಇರಾಮಾನುಜ ನೂತ್ತಂತಾದಿ' ಪ್ರಬನ್ಧವನ್ನು ಸಕಲರೂ 'ಪ್ರತಿದಿನವೂ ಅನುಸನ್ಧಾನಮಾಡಿ

ಉಜ್ಜೀವಿಸುವಂತೆ ಭಗವದನುಗ್ರಹವೂ ಶ್ರೀ ಉಡೈಯವರ್ ಮುಂತಾದ ಆಚಾರ್ಯರುಗಳ ಆಶೀರ್ವಾದಗಳೂ ಉಂಟಾಗಿ ಎಲ್ಲರಿಗೂ ಸಕಲ ಸನ್ಮಂಗಳ ವಾಗಲಿ.

ಇವರ ದಿವ್ಯ ನಾಮಧೇಯಗಳಲ್ಲಿ ಪ್ರಖ್ಯಾತವಾದವು—ಇಳೈಯಾಳ್ವಾರ್, ಯತಿರಾಜರ್ ಅಥವಾ ಯತಿಸಾರ್ವಭೌಮರ್, ರಾಮಾನುಜಮುನಿ, ಲಕ್ಷ್ಮಣಮುನಿ, ಉಡೈಯವರ್, ಪಂಚಾಚಾರ್ಯಪ್ರದಾಶ್ರಯರ್, ಕೃಪಾ ಮಾತ್ರ ಪ್ರಸನ್ನಾಚಾರ್ಯರ್, ಎಂಬೆರುಮಾನಾರ್, ಗೋದಾಗ್ರಜರ್, ನಮ್ ಕೋಯಿಲ್ ಅಣ್ಣನ್, ಶ್ರೀಭಾಷ್ಯಕಾರರ್, ದರ್ಶನಸ್ಥಾಪಕಾಚಾರ್ಯರ್.

ಶ್ರೀರಾಮಾನುಜರು ತಮ್ಮ ಮೂರು ಪ್ರತಿಜ್ಞೆಗಳನ್ನು ಈಡೇರಿಸಿ ನೂರಇಪ್ಪತ್ತು (120) ವರ್ಷಗಳ ತುಂಬು ಜೀವನವನ್ನು ಸಾರ್ಥಕಗೊಳಿಸಿ ತಮ್ಮ ಸ್ವಸ್ಥಾನವಾದ ಪರಮಪದವನ್ನು ಸೇರಿದರು.

ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಒಂದು ಸ್ಥಾನವನ್ನು ಕಲ್ಪಿಸಿ ಅದನ್ನು ಎಲ್ಲೆಡೆಯಲ್ಲಿಯೂ ಪ್ರಚಾರಮಾಡಿ ಅದು ಶಾಶ್ವತವಾಗಿ ನಿಲ್ಲುವಂತೆ ಮಾಡಿದ ಕೀರ್ತಿಯು ಶ್ರೀ ರಾಮಾನುಜರಿಗೇ ಸಲ್ಲುತ್ತದೆ. ಆದುದರಿಂದಲೇ ಈ ದರ್ಶನಕ್ಕೆ "ಎಂಬೆರುಮಾನಾರ್ ದರ್ಶನಂ" (ರಾಮಾನುಜ ದರ್ಶನ) ಎಂಬ ಹೆಸರು ಪ್ರಸಿದ್ಧವಾಗಿರುತ್ತಾ ಶ್ರೀರಾಮಾನುಜರಿಗೆ "ದರ್ಶನಸ್ಥಾಪಕಾಚಾರ್ಯ"ರೆಂಬ ನಾಮಧೇಯವೂ ಸರ್ವವಿದಿತವಾಗಿದೆ.

———

ಶ್ರೀರಾಮಾನುಜರ ಕೃತಿಗಳು ನವರತ್ನಗಳಂತೆ ಒಂಬತ್ತು ಗ್ರಂಥಗಳು—

೧) ವೇದಾರ್ಥ ಸಂಗ್ರಹ ೨) ಗೀತಾಭಾಷ್ಯ ೩) ಶ್ರೀಭಾಷ್ಯ ೪) ವೇದಾನ್ತಸಾರ ೫) ವೇದಾನ್ತದೀಪ ೬) ಶರಣಾಗತಿ ಗದ್ಯ ೭) ಶ್ರೀರಂಗ ಗದ್ಯ ೮) ಶ್ರೀ ವೈಕುಂಠ ಗದ್ಯ ೯) ನಿತ್ಯಗ್ರಂಥ (ಭಗವದಾರಾಧನ ಕೈಪಿಡಿ) ಈ ಗ್ರಂಥಗಳನ್ನು ಗುರು ಮುಖೇನ ವ್ಯಾಸಂಗ ಮಾಡಿ ಸಕಲರೂ ಉಜ್ಜೀವಿಸಬೇಕು.

———

ಶ್ರೀ

ಶ್ರೀಮತೇ ರಾಮಾನುಜಾಯ ನಮಃ

## ಶ್ರೀ ಮಣವಾಳಮಾಮುನಿಹಳ್ (ವರವರಮುನಿ) ವೈಭವಂ

ಶ್ರೀಶೈಲೇಶದಯಾಪಾತ್ರಂ ಧೀಭಕ್ತ್ಯಾದಿಗುಣಾರ್ಣವಂ ।
ಯತೀನ್ದ್ರಪ್ರವಣಂ ವನ್ದೇ ರಮ್ಯಜಾಮಾತರಂ ಮುನಿಂ ॥

ಶ್ರೀಮನ್ನಾರಾಯಣನೇ ಪ್ರಥಮಾಚಾರ್ಯನಾಗಿರುವ ನಮ್ಮ ಗುರು ಪರಂಪರೆಯಲ್ಲಿ ಶ್ರೀ ನಮ್ಮಾಳ್ವಾರ್, ಶ್ರೀ ನಾಥಮುನಿ, ಶ್ರೀ ಆಳವನ್ದಾರ್, ಶ್ರೀ ರಾಮಾನುಜಾಚಾರ್ಯರೇ ಮೊದಲಾದ ಆಚಾರ್ಯರುಗಳಿಂದ ಅನುಸ್ಯೂತವಾಗಿ ಉಪದೇಶ ಪರಂಪರಾ ಪ್ರಾಪ್ತವಾಗಿರುವ ಶ್ರೀವೈಷ್ಣವ ಸಿದ್ಧಾನ್ತದವನ್ನು ಶ್ರೀ ಭಾಷ್ಯಕಾರರು ಸರ್ವತ್ರ ಪ್ರಚಾರ ಮಾಡಿದರು. ಇವರು ಈ ಸಿದ್ಧಾನ್ತಕ್ಕೆ ಮಾಡಿದ ಮಹೋಪಕಾರದ ಸ್ಮರಣೆಗೆ ಇದಕ್ಕೆ 'ಎಂಬೆರುಮಾನಾರ್ ದರ್ಶನ' (ರಾಮಾನುಜ ದರ್ಶನ) ಎಂಬ ಹೆಸರು ಶ್ರೀರಂಗನಾಥನಿಂದಲೇ ಅನುಗ್ರಹಿಸಲ್ಪಟ್ಟು ಸುಪ್ರಸಿದ್ಧವಾಗಿದೆ. ಶ್ರೀ ರಾಮಾನುಜರು ತಮ್ಮ ಕಾಲದಲ್ಲಿಯೇ ಸಿದ್ಧಾನ್ತ ಪ್ರವಚನ ಮತ್ತು ಪ್ರಚಾರಕ್ಕಾಗಿ ಎಪ್ಪತ್ತನಾಲ್ಕು (೭೪) ಮುಖ್ಯ ಶಿಷ್ಯರನ್ನು ಪೀಠಾಧಿಪತಿಗಳಾಗಿ ನಿಯಮಿಸಿದರು. ಇವರಲ್ಲಿ "ರಾಮಾನುಜ ಪದಚ್ಛಾಯಾ" ಎಂಬಂತೆ ಬೆಳೆದು ಬಂದ "ಎಂಬಾರ್" ಎಂಬುವರು ಪರಮ ವಿರಕ್ತರಾಗಿದ್ದು ಶ್ರೀ ಕೂರತ್ತಾಳ್ವಾರ್ (ಕೂರೇಶ)ರವರ ಕುಮಾರರಾದ ಪರಾಶರ ಭಟ್ಟರಿಗೆ ಆಚಾರ್ಯರಾದರು. ಅನಂತರ ನಂಜೀಯರ್, ನಂಬಿಳ್ಳೈ, ವಡಕ್ಕುತ್ತಿರುವೀಧಿಪಿಳ್ಳೈ ಲೋಕಾಚಾರ್ಯರೆಂಬ ಗುರುಪರಂಪರೆ ಬೆಳೆಯಿತು. ಪಿಳ್ಳೈ ಲೋಕಾಚಾರ್ಯರು 'ಮುಮುಕ್ಷಪ್ಪಡಿ', ತತ್ವತ್ರಯಂ, ಶ್ರೀ ವಚನಭೂಷಣಂ ಇತ್ಯಾದಿ ರಹಸ್ಯ ಗ್ರಂಥಗಳನ್ನು ರಚಿಸಿ ಪರಮೋಪಕಾರ ಮಾಡಿದರು. ಲೋಕಾಚಾರ್ಯರ ತಮ್ಮಂದಿರಾದ ಅಳ್ಗಿಯ ಮಣವಾಳ ಪ್ಪೆರುಮಾಳ್‌ನಾಯನಾರ್ ಎಂಬ

ಮಹನೀಯರು "ಆಚಾರ್ಯ ಹೃದಯ"ವೆಂಬ ಗ್ರಂಥವನ್ನು ರಚಿಸಿದರು. ಪಿಳ್ಳೈ ಲೋಕಾಚಾರ್ಯರ ಶಿಷ್ಯರಾದ ತಿರುವಾಯ್ಮೊಳಿಪ್ಪಿಳ್ಳೈ (ಶ್ರೀಶೈಲೇಶ) ಯವರ ಶಿಷ್ಯರು ಮಣವಾಳ ಮಾಮುನಿಗಳು (ವರವರಮುನಿಗಳು).

ಶ್ರೀರಾಮಾನುಜರಂತೆಯೇ ಶ್ರೀ ಮಣವಾಳ ಮಾಮುನಿಗಳೂ ಆದಿ ಶೇಷನ ಅವತಾರವೆಂದೂ ಆದ್ದರಿಂದಲೇ ಇವರು 'ರಾಮಾನುಜರ ಪುನರವ ತಾರವೆಂದೂ ಪ್ರಸಿದ್ಧರಾಗಿದ್ದಾರೆ.

ಈಗ್ಗೆ ಆರುನೂರನಾಲ್ಕು ವರ್ಷಗಳ ಹಿಂದೆ ಶ್ರೀ ಸಾಧಾರಣ ನಾಮ ಸಂವತ್ಸರವಲ್ಲಿ ತುಲಾಮಾಸ ೨೬ನೇ ತೇದಿ ಆಶ್ವಯುಜ ಶುಕ್ಲ ಚತುರ್ಥೀ ಗುರುವಾರ, ಸರ್ವಸಿದ್ಧಿಗಳಿಗೂ ಮೂಲಕಾರಣವಾದ ಮೂಲಾ ನಕ್ಷತ್ರದಲ್ಲಿ ಶ್ರೀಸಮ್ಮಾಳ್ವಾರ್ರವರ ಪವಿತ್ರಜನ್ಮಸ್ಥಳವಾದ ಆಳ್ವಾರ್ ತಿರುನಹರೀ ತಿರುಕ್ಕುರುಹೂರ್ (ಕುರುಕಾಪುರೀ) ಎಂಬ ದಿವ್ಯ ಕ್ಷೇತ್ರದಲ್ಲಿ ದ್ವಿಜಕುಲ ತಿಲಕರಾದ 'ತಿರುನಾವೀರುಡೈಯಂ ಪಿರ್ರಾ ತಾತರಣ್ಣರರ್ಯೆಯರ್' ಎಂಬ ಮಹಾತ್ಮರ ಸುಪುತ್ರರಾಗಿ ಮಣವಾಳ ಮಾಮುನಿಗಳು ಅವತರಿಸಿದರು. ಶಿಶುವಿನ ರೂಪ, ಸೌಂದರ್ಯ, ಲಾವಣ್ಯಾದಿಗಳನ್ನು ಕಂಡು ಇವರಿಗೆ ಶ್ರೀರಂಗದ ಉತ್ಸವಮೂರ್ತಿಯವರ ನಾಮಧೇಯವಾದ "ಅಳ್ಗಿಯಮಣವಾಳ ಪ್ಪೆರು ಮಾಳ್ ನಾಯನಾರ್" (ರಮ್ಯಜಾಮಾತೃ) ಎಂಬ ನಾಮಧೇಯವನ್ನು ಮಾಡಿದರು. ಬಾಲ್ಯದಿಂದಲೇ ಇವರು ಪರಮಾತ್ಮನ ವಿಷಯದಲ್ಲಿ ವಿಶೇಷ ಆಸಕ್ತಿಯುಳ್ಳವರಾಗಿದ್ದರು.

ಇವರ ಮಾತಾಮಹರು ಹತ್ತಿರದಲ್ಲಿದ್ದ "ಶಿಕ್ಕಲ್‌ಕಿಡಾರಂ" ಎಂಬ ಗ್ರಾಮದಲ್ಲಿ ದರ್ಶನ ಪ್ರವಚನ ಪರರಾಗಿದ್ದರು. ಶ್ರೀ ಮಣವಾಳ ಮಾಮುನಿಗಳ ತಂದೆಯವರೂ ತಮ್ಮ ಮಾವನವರ ಸನ್ನಿಧಿಯಲ್ಲಿಯೇ ಇರುತ್ತಾ ರಹಸ್ಯಾರ್ಥಗಳನ್ನು ಅಭ್ಯಸಿಸುತ್ತಿದ್ದರು, ಬಾಲ್ಯದಲ್ಲಿ ನಾಯನಾರ್ ಈ ಗ್ರಾಮದಲ್ಲಿಯೇ ಇರುತ್ತಾ ತಂದೆಯವರಲ್ಲಿಯೂ ಮಾತುಲರಲ್ಲಿಯೂ ವೇದ ವೇದಾನ್ತ, ದಿವ್ಯಪ್ರಬನ್ಧ, ಗೀತಾಭಾಷ್ಯ ಮತ್ತಿತರ ಶಾಸ್ತ್ರಗಳನ್ನು ಪ್ರವಚನಮಾಡಿದರು. ಯುಕ್ತವಯಸ್ಸಿನಲ್ಲಿ ವಿವಾಹವಾಗಿ ಗೃಹಸ್ಥಾಶ್ರಮ

ವನ್ನು ಸ್ವೀಕರಿಸಿದರು. ಕೆಲವು ಕಾಲಾನಂತರ ಪಿತೃಯೋಗವುಂಟಾಗಲು ಚರಮ ಕೈಂಕರ್ಯಗಳನ್ನು ನೆರವೇರಿಸಿನಾಯನಾರ್ರವರು ಶಿಕ್ಕಲ್‌ಕಿಡಾರ ದಿಂದ ತಮ್ಮ ಜನ್ಮಸ್ಥಳವಾದ ತಿರುನಗರಿಗೆ ಬಂದು ಅಲ್ಲಿ ಶ್ರೀ ಪಿಳ್ಳೈ ಲೋಕಾ ಚಾರ್ಯರ ಶಿಷ್ಯರಾದ "ಶ್ರೀಶೈಲೇಶರ್" ಎಂಬ ತಿರುವಾಯೊಳ್ಳಿಪಿಳ್ಳೈಯವರನ್ನು ಆಶ್ರಯಿಸಿದರು. ಸಚ್ಛಿಷ್ಯಲಕ್ಷಣಯುಕ್ತರಾಗಿಯೂ ಜ್ಞಾನ, ಭಕ್ತಿ, ವೈರಾಗ್ಯಾದಿ ಸದ್ಗುಣಗಳಿಂದಲೂ ಕೂಡಿದ ನಾಯನಾರನ್ನು ಆದರಿಸಿ ಆಚಾರ್ಯರೂ ಇವರಿಗೆ ಅತ್ಯಾದರದಿಂದ ದ್ರಾವಿಡ ಪ್ರಬನ್ಧಗಳ ವ್ಯಾಖ್ಯಾನಗಳನ್ನೂ ರಹಸ್ಯ ಗಳನ್ನು ಆಚಾರ್ಯಾಭಿಮಾನವನ್ನು ಸಂಪೂರ್ಣವಾಗಿ ಹೊಂದಿದ್ದ ಶ್ರೀ ನಾಯ ನಾರ್ರವರು ತಿರುವಾಯ್ಮೊಳ್ಳಿಪ್ಪಿಳ್ಳೈಯರ ವಿಶೇಷ ಕೃಪೆಗೆ ಪಾತ್ರರಾಗಿ ಸಕಲ ಶಾಸ್ತ್ರಾರ್ಥಗಳನ್ನೂ ಕ್ರಮೇಣ ಅಧಿಕರಿಸಿದರು.

ಶ್ರೀ ರಾಮಾನುಜರಲ್ಲಿ ಅಳ್ಗಿಯಮಣವಾಳರಿಗೆ ಇದ್ದ ವಿಶೇಷ ಶ್ರದ್ಧಾಭಕ್ತಿಗಳನ್ನು ಕಂಡುಕೊಂಡು ಶ್ರೀಶೈಲೇಶರು ಪ್ರತ್ಯೇಕವಾಗಿ ಉಡೈಯವರ್ ಸನ್ನಿಧಿಯನ್ನೂ ಚತುರ್ವೇದಿಮಂಗಲವೆಂಬ ಅಗ್ರಹಾರವನ್ನೂ ಏರ್ಪಡಿಸಿ ಅದರ ಸರ್ವಾಧಿಕಾರವನ್ನೂ ಅವರಿಗೆ ವಹಿಸಿ "ಯತೀನ್ದ್ರ ಪ್ರವಣ"ರೆಂಬ ನಾಮಧೇಯವನ್ನು ಅನುಗ್ರಹಿಸಿದರು. ಈ ರಾಮಾನುಜರ ವಿಷಯವಾಗಿ "ಯತಿರಾಜವಿಂಶತಿ" ಎಂಬ ಸ್ತೋತ್ರವನ್ನು ಆಚಾರ್ಯನಿಯ ಮನದಂತೆ ರಚಿಸಿದರು. ಅದರಲ್ಲಿ "ಶ್ರೀಶೈಲನಾಥ ಕರುಣಾಪರಿಣಾಮ ದತ್ತಾಂ...." ಎಂಬ ಶ್ಲೋಕದಲ್ಲಿ ಈ ಆಚಾರ್ಯರು ಮಾಡಿದ ಉಪಕಾರದ ಸ್ಮರಣೆ ವ್ಯಕ್ತವಾಗಿದೆ.

ಆಚಾರ್ಯರ ಸನ್ನಿಧಿಯಲ್ಲಿ ಕಾಲಕ್ಷೇಪಾದಿಗಳನ್ನು ನಡೆಸುತ್ತಿರುವಾಗ ನಾಯನಾರ್ರಿಗೆ ಇಬ್ಬರು ಕುಮಾರರು ಜನಿಸಿದರು. ಹಿರಿಯ ಮಗನಿಗೆ 'ರಾಮಾನುಜಪಿಳ್ಳೈ' ಎಂದೂ, ಎರಡನೆಯವರಿಗೆ 'ವಿಷ್ಣು ಚಿತ್ತರ್' ಎಂದೂ ಆಚಾರ್ಯ ನಿಯಮದಂತೆ ನಾಮಕರಣ ಮಾಡಿದರು. ಹಿರಿಯಮಗನಾದ ರಾಮಾನುಜಪಿಳ್ಳೈಯವರ ಹಿರಿಯ ಮಗನೇ ಆಚಾರ್ಯ ಪೌತ್ರರಾದ "ಅಭಿರಾಮವರಾಭಿಧಾನ'' ರೆಂಬ ನಾಮಧೇಯದಿಂದ 'ಉಪದೇಶ ರತ್ನ ಮಾಲೈ'ಗೆ ಸಂಸ್ಕೃತ ಅನುವಾದವನ್ನು ರಚಿಸಿದ್ದಾರೆ. ಇವರಿಗೆ ''ಜೀಯರ್

ನಾಯನಾರ್" ಎಂಬ ವಿಶೇಷ ನಾಮಧೇಯವುಂಟು. ಮುಂದೆ ಇವರೇ ಉತ್ತರಾಧಿಕಾರಿಯಾದರು.

ಆಳ್ವಾರ್ ತಿರುನಹರಿಯಲ್ಲಿ ಅನೇಕ ಶಿಷ್ಯರುಗಳಿಗೆ ಕಾಲಕ್ಷೇಪಾದಿಗಳನ್ನು ನಡೆಸುತ್ತಾ ದರ್ಶನ ನಿರ್ವಾಹಕರಾಗಿದ್ದ (ಶ್ರೀಶೈಲಾರ್ಯರು) ತಿರುವಾಯ್ಮೊಳಿಪಿಳ್ಳೈಗಳು ವೃದ್ಧಾಪ್ಯದಿಂದ ಅಶಕ್ತರಾದಾಗ ಮುಂದಕ್ಕೆ ದರ್ಶನ ನಿರ್ವಾಹವನ್ನು ನಡೆಸಲು ಶ್ರೀ ಅಳಗಿಯಮಣವಾಳರೇ ಯೋಗ್ಯರೆಂದು ನಿರ್ಣಯಿಸಿ, ಶ್ರೀರಂಗ ಕ್ಷೇತ್ರದಲ್ಲಿ ನಿತ್ಯ ವಾಸಮಾಡುತ್ತಾ, ಶ್ರೀರಂಗನಾಥನ ಕೈಂಕರ್ಯ ನಿರತರಾಗಿರಬೇಕೆಂದು ನಾಯನಾರ್ರಿಗೆ ನಿಯಮಿಸಿದರು. ಕೆಲವು ಕಾಲದಲ್ಲಿಯೇ ಪಿಳ್ಳೈಗಳು ಪರಂಧಾಮವನ್ನೈದಲು ಎಲ್ಲಾ ಶಿಷ್ಯರೂ ಸೇರಿ ಅವರಿಗೆ ಬ್ರಹ್ಮಮೇಧ ಸಂಸ್ಕಾರವನ್ನು ಸಾಂಗವಾಗಿ ನೆರವೇರಿಸಿದರು. ಆಚಾರ್ಯರ ನಿಯಮನದಂತೆ ಅಳಗಿಯಮಣವಾಳನಾಯನಾರ್ರನ್ನೇ ಗುರುಗಳನ್ನಾಗಿ ಪರಿಗಣಿಸುತ್ತಿದ್ದರು. ಕೊಂಚಕಾಲವಾದ ಮೇಲೆ ನಾಯನಾರ್ರವರು ಆಳ್ವಾರ್ ತಿರುನಹರಿಯ ನಮ್ಮಾಳ್ವಾರ್ರವರ ಅಪ್ಪಣೆಯನ್ನು ಪಡೆದು ಶ್ರೀರಂಗಕ್ಕೆ ದಯಮಾಡಿಸಿ ಅಲ್ಲಿ ಕೊಂಚಕಾಲ ವಾಸಿಸುತ್ತಿದ್ದರು.

ಕೆಲವು ಕಾಲಾನಂತರ ನಾಯನಾರ್ರವರು ಶಿಷ್ಯರೊಡಗೂಡಿ ತಿರುವೆಳ್ಳರೈ—ತಿರುಕ್ಕೋವಲೂರ್ ಮಾರ್ಗವಾಗಿ ತಿರುಪತಿಗೆ ಸೇರಿ ಅಲ್ಲಿ ತಿರುವೇಂಗಡಮುಡೈಯಾರ್ (ಶ್ರೀ ಶ್ರೀನಿವಾಸರ) ದಿವ್ಯ ದರ್ಶನವನ್ನು ಮಾಡಿ ಕಾಂಚೀಪುರಕ್ಕೆ ದಯಮಾಡಿಸಿದರು. ಅಲ್ಲಿ ಕಿಡಾಂಬಿ ಆಚ್ಚಾನ್ ಎಂಬ ಮಹನೀಯರಲ್ಲಿ ಶ್ರೀಭಾಷ್ಯವನ್ನು ಅಧಿಕರಿಸಿದರು. ಶಿಷ್ಯರ ನಿರ್ಬಂಧದಿಂದ ಅಲ್ಲಿ ಯಥೋಕ್ತಕಾರಿ ಸನ್ನಿಧಿಯಲ್ಲಿ ಒಂದು ವರ್ಷಕಾಲ ನಾಯನಾರ್ರೇ ಶ್ರೀ ಭಾಷ್ಯ ಕಾಲಕ್ಷೇಪವನ್ನು ನಡೆಸಿದರು.

ಆಮೇಲೆ ಶ್ರೀರಂಗಕ್ಕೆ ಹಿಂತಿರುಗಿ, ಶ್ರೀರಂಗನಾಥನ ಕೈಂಕರ್ಯ ಪರರಾಗಿರುತ್ತಿರಲು, ಗೃಹಸ್ಥಾಶ್ರಮಕ್ಕೆ ಸಂಬಂಧಿಸಿದಂತೆ ಆಗಾಗ್ಗೆ ಅಶೌಚಾದಿಗಳುಂಟಾಗಿ ಭಗವತ್ಸೇವೆಗೆ ವಿಘ್ನ ಉಂಟಾಗುತ್ತಿದ್ದುದನ್ನರಿತು ಸನ್ಯಾಸಾಶ್ರಮವನ್ನು ಸ್ವೀಕರಿಸಲು ನಿಶ್ಚಯಿಸಿ, ಪ್ರಸಿದ್ಧರಾದ ಶ್ರೀ ಶಠಕೋಪ

ಜೀಯುವರಿಂದ ಸನ್ಯಾಸ ದೀಕ್ಷೆಯನ್ನು ಪಡೆದರು. ಶ್ರೀ ರಂಗನಾಥನು ಇವರಿಗೆ ಅಳ್ಗಿಯಮಣವಾಳ ಮಾಮುನಿ (ವರವರಮುನಿ) ಎಂದು ನಾಮಧೇಯವನ್ನು ಅನುಗ್ರಹಿಸಿದನು. ಇವರಿಗಾಗಿ ಶ್ರೀರಂಗದ ಪಲ್ಲವರಾರ್ಯ ಮಠವನ್ನು ಏರ್ಪಡಿಸಲು ಶಿಷ್ಯರ ಮೂಲಕ ಆ ಮಠವನ್ನು ಜೀರ್ಣೋದ್ಧಾರ ಮಾಡಿಸಿ "ತಿರುಮಲೈ ಆಳ್ವಾರ್ ಮಂಟಪ" ಶ್ರೀಶೈಲನಾಥಾರ್ಯ ಮಂಟಪ ಎಂಬ ವ್ಯಾಖ್ಯಾನ ಮಂಟಪವನ್ನು ರಚಿಸಿ ಅದಕ್ಕೆ ಪಿಳ್ಳೈ ಲೋಕಾಚಾರ್ಯರ ತಿರು ಮಾಳಿಗೆಯಿಂದ 'ರಹಸ್ಯಂ ವಿಳೈಂದಮಣ್' ಎಂಬ ಮೃತ್ತಿಕೆಯನ್ನು ತರಿಸಿ ಅಲಂಕರಿಸಿ ಕಾಲಕ್ಷೇಪವನ್ನು ಆ ಮಂಟಪದಲ್ಲಿ ನಡೆಸುತ್ತಿದ್ದರು.

ಗೋವಂದದಾಸಪ್ಪರ್ ಎಂಬ ಮಹನೀಯರು ಮಣವಾಳ ಮಾಮುನಿ ಗಳನ್ನು ಆಶ್ರಯಿಸಿ 'ಪಟ್ಟರ್' ಪಿರಾನ್ ಜೀಯರ್' ಎಂದು ಪ್ರಸಿದ್ಧರಾದರು. ಕೋಯಿಲ್ ಕಂದಾಡೈಯಣ್ಣನ್ ಎಂಬ ಆಚಾರ್ಯಪುರುಷರೂ. ತಿರುಪತಿ ತಿರು ವೇಂಗಡ ಮುಡೈಯರ್ನ್ ಸನ್ನಿಧಿಯಲ್ಲಿ ಕೈಂಕರ್ಯನಿರತರಾಗಿದ್ದ ಶ್ರೀ ಪ್ರತಿವಾದಿ ಭಯಂಕರಂ ಅಣ್ಣನ್ ಎಂಬ ಮಹಾತ್ಮರೂ ಇವರ ಶಿಷ್ಯರಾಗಿ 'ಶ್ರೀ ವೈಷ್ಣವ ದಾಸರೆಂದೂ ಪ್ರಖ್ಯಾತರಾದರು. ಹೀಗೆ ಶಿಷ್ಯ ಸಮೃದ್ಧಿಯೊಂದಿಗೆ ಶ್ರೀರಂಗ ನಾಥನ ಕೈಂಕರ್ಯಪರರಾಗಿ ಕಾಲಕ್ಷೇಪ ನಡೆಯಿಸುತ್ತಿದ ರು.

ಕೆಲವು ಕಾಲಾನಂತರ ಶ್ರೀ ರಂಗನಾಥನ ಅಪ್ಪಣೆಯನ್ನು ಪಡೆದು ವರ ವರ ಮುನಿಗಳು ಶಿಷ್ಯಸಮೂಹದೊಡನೆ ದಿವ್ಯ ದೇಶ ಯಾತ್ರೆಯನ್ನು ಕೈಕೊಂಡು ಮಧುರಾಂತಕಂ, ಕಾಂಚೀಪುರಂ, ತಿರುಮಲೈ, ಶ್ರೀ ಪೆರುಂಬೂ ದೂರು ಮುಂತಾದ ದಿವ್ಯ ಕ್ಷೇತ್ರಗಳಿಗೆ ಬಿಜ ಮಾಡಿಸಿ ಅಲ್ಲಲ್ಲಿ ಸನ್ನಿಧಿ ಉತ್ಸವಗಳೂ ಕೈಂಕರ್ಯಗಳೂ ಕ್ರಮವಾಗಿ ನಡೆಯುವಂತೆ ಮಾಡುತ್ತಾ ಬಂದರು. 'ಆಚಾರ್ಯ ಹೃದಯ' ಗ್ರಂಥದ ಅರ್ಥವಿಶೇಷಗಳನ್ನು ಚೆನ್ನಾಗಿ ತಿಳಿದಿದ್ದು, ಪ್ರಖ್ಯಾತರಾಗಿದ್ದ 'ತಿರುನಾರಾಯಣಪುರತ್ತಾಯ್' ಎಂದು ಕರೆ ಯಲ್ಪಡುತ್ತಿದ್ದ 'ಜನನ್ಯಾಚಾರ್ಯ'ರವರಲ್ಲಿ ಈ ಅರ್ಥ ವಿಶೇಷಗಳನ್ನು ಅರಿಯ ಬೇಕೆಂದು ಅಭಿಪ್ರಾಯಪಟ್ಟು ಮಾಮುನಿಗಳು (ಮೇಲುಕೋಟೆ) ತಿರು ನಾರಾಯಣಪುರಕ್ಕೆ ಪ್ರಯಾಣ ಹೊರಟರು. ಈ ಮಧ್ಯೆ ಜನನ್ಯಾಚಾರ್ಯರೂ ಮಣವಾಳಮಾಮುನಿಗಳ ಮಹಾತ್ಮ್ಯವನ್ನು ಕೇಳಿ ಅವರನ್ನು ಸಂದರ್ಶಿಸ

Funding: IKS/Tattva Heritage and IKS-MoE. Digitization: eGangotri.



ಬೇಕೆಂದು ಶ್ರೀರಂಗಕ್ಕೆ ಹೊರಟಿದ್ದರು. ಇಬ್ಬರೂ ಮಧ್ಯಮಾರ್ಗದಲ್ಲಿ ಸಂಧಿಸಿ ಸಂತೋಷಿಸಿದರು. ಜನನ್ಯಾಚಾರ್ಯರಿಂದ ಆಚಾರ್ಯಹೃದಯದ ಎಲ್ಲಾ ಅರ್ಥವಿಶೇಷಗಳನ್ನೂ ಅರಿತು ವರವರಮುನಿಗಳು ಸರ್ವತೋಮುಖವಾದ ವೈದುಷ್ಯವುಳ್ಳವರಾಗಿ ಪ್ರಕಾಶಿಸುತ್ತಿದ್ದರು. (ತಿರುನಾರಾಯಣಪುರದಲ್ಲಿ ನಾಲೂರಾಚ್ಚಾನ್ ಪಿಳ್ಳೈಯೆಂಬ ಮಹಾತ್ಮರಿಂದ ಈಡು ಮುಪ್ಪತ್ತಾರಾಯಿರಪ್ಪಡಿ ವ್ಯಾಖ್ಯಾನ ಕಾಲಕ್ಷೇಪ ನಡೆಯಿತು). ಪಾಂಡ್ಯ ದೇಶದಲ್ಲಿ ಸಂಚರಿಸುತ್ತಾ ಅಲ್ಲಿಯ ದಿವ್ಯ ದೇಶಗಳಲ್ಲಿ ಮಂಗಳಾಸನಗಳೂ ಕೈಂಕರ್ಯಗಳೂ ಕ್ರಮವಾಗಿ ನಡೆಯುವಂತೆ ಏರ್ಪಡಿಸಿ ಕಾಲಕ್ರಮದಲ್ಲಿ ಶ್ರೀರಂಗಕ್ಕೆ ಹಿಂತಿರುಗಿ ಶ್ರೀರಂಗನಾಥನ ಕೈಂಕರ್ಯದಲ್ಲಿ ನಿರತರಾದರು.

ಹೀಗಿರುವಲ್ಲಿ ಘಟಿಕಾಚಲದ ಬಳಿಯಿಂದ 'ಎರುಂಬಿಯಪ್ಪಾ' ಎಂಬ ವಿದ್ವಾಂಸರು ಮಣವಾಳಮಾಮುನಿಗಳ ಮಹಿಮೆಯನ್ನು ಕೇಳಿ ಅವರನ್ನು ದರ್ಶನ ಮಾಡಬೇಕೆಂದು ಶ್ರೀರಂಗಕ್ಕೆ ಬಂದು ಸೇರಿದರು. ಕಾಲಕ್ಷೇಪ ಗೋಷ್ಠಿಯಲ್ಲಿ ಬಂದು ಸೇರಿದರೂ ಅಲ್ಲಿ ತೀರ್ಥಪ್ರಸಾದ ಸ್ವೀಕಾರ ಮಾಡದೆ ಸ್ವಗ್ರಾಮಕ್ಕೆ ಹಿಂತಿರುಗಲು ತನ್ನ ಆರಾಧ್ಯ ದೇವರಿಂದ ಶಿಕ್ಷಿತರಾಗಿ ಪುನಃ ಶ್ರೀರಂಗಕ್ಕೆ ಬಂದು ಮಾಮುನಿಗಳನ್ನು ಆಶ್ರಯಿಸಿ ಅವರ ಶಿಷ್ಯರಾದರು. ಇವರೇ 'ದೇವರಾಜಗುರು' ಎಂಬ ಹೆಸರಿನಿಂದ "ವರವರಮುನಿ ದಿನಚರ್ಯಾ" ಎಂಬ ಸ್ತೋತ್ರದಲ್ಲಿ ಶ್ರೀಮಣವಾಳ ಮಾಮುನಿಗಳ ನಿತ್ಯದಿನಚರಿಯನ್ನು ಸರಳವಾಗಿ ವಿವರಿಸಿರುತ್ತಾರೆ. ವರವರಮುನಿ ಶತಕಂ ಎಂಬ ಸ್ತೋತ್ರದ ಜೊತೆಗೆ ಕೆಲವು ಚಂಪೂ, ನಾಟಕ, ಕಾವ್ಯಾದಿಗಳನ್ನೂ ರಚಿಸಿರುತ್ತಾರೆ. ಶ್ರೀ ಮಣವಾಳ ಮಾಮುನಿಗಳ ಕಾಲಕ್ಷೇಪ ಗೋಷ್ಠಿಯಲ್ಲಿ ವಿವರಿಸಲ್ಪಡುತ್ತಿದ್ದ ಅರ್ಥವಿಶೇಷಗಳನ್ನೂ ವಾಗ್ವೈಖರಿಯನ್ನೂ ಕಂಡು ಇವರನ್ನು 'ವಿಶದವಾಕ್ ಶಿಖಾಮಣಿ'ಗಳೆಂದು ಸರ್ವರೂ ಕೊಂಡಾಡುತ್ತಿದ್ದರು.

ಕಾಲಕ್ಷೇಪಾದಿ ಪ್ರವಚನಗಳು ಶಿಷ್ಯರೊಡನೆ ಈ ರೀತಿ ನಡೆಯುತ್ತಿರಲು ಶ್ರೀರಂಗನಾಥನಿಗೂ ಈ ಆಚಾರ್ಯರ ಸಂಬಂಧವನ್ನು ಹೊಂದಬೇಕೆಂಬ ಆಸೆಯುಂಟಾಗಿ ಶ್ರೀಮಣನಾಳಮಾಮುನಿಗಳು ಸನ್ನಿಧಿಯ ರಂಗಮಂಟಪದಲ್ಲಿಯೇ ತಿರುವಾಯ್ಮೊೞಿ ಪ್ರಬನ್ಧದ "ಈಡು ಮುಪ್ಪತ್ತಾಯಿರಪ್ಪಡಿ"

ವ್ಯಾಖ್ಯಾನ ಕಾಲಕ್ಷೇಪವನ್ನು ನಡೆಸಬೇಕೆಂದು ಆತನ ಅರ್ಚಕ ಮುಖೇನ ಆದೇಶವಿತ್ತನು. ಈ ಆಜ್ಞೆಯನ್ನು ಶಿರಸಾವಹಿಸಿ ಮಾಮುನಿಗಳು ಒಂದು ವರ್ಷ ಕಾಲ ಅವಿಚ್ಛಿನ್ನವಾಗಿ "ಈಡು" ಪ್ರವಚನವನ್ನು ನಡೆಸಿದರು, ಶ್ರೀರಂಗನಾಥನು ಮಹಿಷೀವರ್ಗದೊಡನೆಯೂ ಸಕಲ ಪರಿವಾರದೊಡನೆಯೂ ಬಿಜಮಾಡಿಸಿ ಈ ಕಾಲಕ್ಷೇಪಗೋಷ್ಠಿಯಲ್ಲಿ ಅನ್ವಯಿಸುತ್ತಿದ್ದನು. ಶಾತ್ತು ಮೊರೈಯ ದಿನ ಆಚಾರ್ಯ ಸಂಭಾವನೆಯ ಸಮಯದಲ್ಲಿ ಇದ್ದಕಿದ್ದಂತೆ ಐದು ವರ್ಷದ ಬಾಲಕನಂತೆ ಗೋಷ್ಠಿಯಲ್ಲಿ ಮಧ್ಯೆ ಪ್ರವೇಶಿಸಿ ಫಲತಾಂಬೂಲಾದಿ ಗಳಿದ್ದ ಸ್ಥಾನದಲ್ಲಿ ನಿಂತು "ಶ್ರೀಶೈಲೇಶದಯಾಪಾತ್ರಂ ಧೀಭಕ್ತ್ಯಾದಿ ಗುಣಾರ್ಣವಂ॥ ಯತೀನ್ದ್ರಪ್ರವಣಂ ವನ್ದೇ ರಮ್ಯಜಾಮಾತರಂ ಮುನಿ" ಎಂಬ ಶ್ಲೋಕವನ್ನು ಅನುಸಂಧಾನಮಾಡಿ ಅನ್ತರ್ಧಾನನಾದನು. ಈ ಆಶ್ಚರ್ಯ ವನ್ನು ಕಂಡ ಗೋಷ್ಠಿಯವರೆಲ್ಲರೂ ಈ ಶ್ಲೋಕವು ಶ್ರೀರಂಗನಾಥನೇ ಮಾಮುನಿಗಳ ವಿಷಯದಲ್ಲಿ ಅನುಗ್ರಹಿಸಿದ ತನಿಯರ್ ಎಂದು ಸಂತೋಷಿ ಸುತ್ತಾ ಇದನ್ನು ಪ್ರತಿನಿತ್ಯವೂ ದಿವ್ಯ ಪ್ರಬನ್ಧ ಅನುಸನ್ಧಾನದ ಆರಂಭದಲ್ಲಿ ಮತ್ತು ಪರಿಸಮಾಪ್ತಿಯಲ್ಲಿ ಪಠಿಸಬೇಕೆಂದು ಏರ್ಪಡಿಸಿದರು. ಜೀಯರಿಗೆ "ಮುಪತ್ತಾರಾಯಿಳಪ್ಪಡಿ ಪೆರುಕ್ಕರ್'' ಎಂಬ ಖ್ಯಾತಿಯುಂಟಾಯಿತು.

ಇವರ ನಾಮಧೇಯಗಳಲ್ಲಿ ಮುಖ್ಯವಾದವುಗಳಂ :—

ಅಳ್ಗಿಯ ಮಣವಾಳಪ್ಪೇರುಮಾಳ್ ನಾಯನಾರ್; ರಮ್ಯಜಾಮಾತೃ ಮುನಿ ; ವರವರಮುನಿ ; ಸೌಮ್ಯಜಾಮಾತೃಮುನಿ , ಪೆರಿಯಜೀಯರ್ ; ಕೋಯಿಲ್ ಮಣವಾಳಮಾಮುನಿಹಳ್ ; ಶ್ರೀ ಶೈಲೇಶದಯಾಪಾತ್ರರ್ ; ವಿಶದವಾಕ್ ಶಿಖಾಮಣಿ, ಮುಪ್ಪತ್ತಾರಾಯಿರಪ್ಪೆರುಕ್ಕರ್.

ಶ್ರೀ ಮಣವಾಳ ಮುನಿಗಳ ಅನೇಕ ಶಿಷ್ಯರಲ್ಲಿ ಅಷ್ಟದಿಗ್ಗಜಗಳೆಂದು ಪ್ರಖ್ಯಾತರಾದವರು ಎಂಟು ಮಹನೀಯರು. ಅವರಲ್ಲಿ ಮೂವರು ಸನ್ಯಾಸಿ ಗಳು ಐದು ಗ್ರಹಸ್ಥರು—.

೧) ವಾನಮಾಮಲೈ ಜೀಯರ್ ೨) ಪಟ್ಟರ್ಪ್ಪಿರಾನ್ ಜೀಯರ್ ೩) ತಿರುವೇಂಗಡ ರಾಮಾನುಜ ಜೀಯರ್ ೪) ಕೋಯಿಲ್ ಅಣ್ಣನ್ ೫) ಪ್ರತಿವಾದಿಭಯಂಕರಂ ಅಣ್ಣನ್ ೬) ಎರುಂಬಿಯಪ್ಪಾ ೭) ಅಪ್ಪಿಳ್ಳೈ ೮) ಅಪ್ಪಿಳ್ಳಾರ್.

ಇವರ ಕೃತಿಗಳು (ದಿವ್ಯ ಸೂಕ್ತಿಗಳು),,ತಮಿಳು, ಸಂಸ್ಕೃತ ಮತ್ತು ಮಣಿಪ್ರವಾಳ್ ಭಾಷೆಗಳಲ್ಲಿವೆ—ಪಿಳ್ಳೈಲೋಕಾಚಾರ್ಯರ ಮುಮುಕ್ಷುಪ್ಪಡಿ ತತ್ವತ್ರಯ, ಶ್ರೀವಚನಭೂಷಣಗಳಿಗೆ ವ್ಯಾಖ್ಯಾನ ; ಅಳ್ಗಿಯಮಣ ವಾಳಪ್ಪೆರುಮಾಳ್ ನಾಯನಾರ್ ಅವರ ಆಚಾರ್ಯ ಹೃದಯಕ್ಕೆ ವ್ಯಾಖ್ಯಾನ ಪೆರಿಯವಾಚ್ಚಾನ್ ಪಿಳ್ಳೈಯವರ ಪೆರಿಯಾಳ್ವಾರ್ ತಿರುಮೊಳಿ ವ್ಯಾಖ್ಯಾನ ದಲ್ಲಿ ಲುಪ್ತವಾಗಿದ್ದ 400 ಪಾಶುರಗಳ ವ್ಯಾಖ್ಯಾನ ; ತಿರುವರಂಗತ್ತ ಮುದನಾ ರ್ರವರ "ರಾಮಾನುಜನೂತ್ತಂದಾದಿ"ಗೆ ಉರೈ ಎಂಬ ಪ್ರತಿಪದಾರ್ಥ, ಅರುಳಾಳಪ್ಪೆರುಮಾಳೆಂಬೆರುಮಾನಾರ್ರವರ್ "ಜ್ಞಾನಸಾರ" 'ಪ್ರಮೇಯಸಾರ' ಗಳಿಗೂ ವಿಳಾಂಶೋಲೈ ಪಿಳ್ಳೈಯವರ್'ಸಪ್ತಗಾಥೆ'ಗೂ ವ್ಯಾಖ್ಯಾನ. ಇವುಗಳು ಮಣಿಪ್ರವಾಳದಲ್ಲಿವೆ. ಸಂಸ್ಕೃತದಲ್ಲಿ ಯತಿರಾಜವಿಂಶತಿ, ದೇವರಾಜಮಂಗಳಂ ಗೀತಾತಾತ್ಪರ್ಯದೀಪಂ ಎಂಬ ಕೃತಿಗಳಿವೆ—ಉಪದೇಶರತ್ನಮಾಲೈ ; ತಿರು ವಾಯ್ಮೊಳಿನೂತ್ತಂದಾದಿ. ಆರ್ತಿ ಪ್ರಬನ್ಧವೆಂಬ ಮೂರು ತಮಿಳ್ ಪ್ರಬನ್ಧ ಗಳನ್ನನುಗ್ರಹಿಸಿದ್ದಾರೆ. ತಿರುವಾರಾಧನ ಪ್ರಯೋಗವೊಂದನ್ನು ಈಡುಮುಪ್ಪ ತ್ತಾರಾಯಿರಪ್ಪಡಿ ವ್ಯಾಖ್ಯಾನಕ್ಕೂ ತಾವು ಅನುಗ್ರಹಿಸಿದ ರಹಸ್ಯ ಗ್ರಂಥಗಳ ವ್ಯಾಖ್ಯಾನಕ್ಕೂ "ಪ್ರಮಾಣತ್ತಿರಟ್ಟು" ಎಂಬ ಆಕರವನ್ನೂ ರಚಿಸಿರುತ್ತಾರೆ.

ಇವರ ಗ್ರಂಥಗಳಲ್ಲಿನ ಮಾಧುರ್ಯ, ಗಾಂಭೀರ್ಯ, ಅರ್ಥಪುಷ್ಟಿ ರಸಪುಷ್ಟಿಗಳು ಅಸಾಧಾರಣವಾದುವು. ಇವರ ಶಿಷ್ಯರ ಮಹಿಮೆಯನ್ನು ವರ್ಣಿಸುವ ಅಪಗತಮದ ಮಾನೈಃ ಅನ್ತಿಮೋಪಾಯ ನಿಷ್ಠೈಃ ಅಧಿಗತ ಪರಮಾರ್ಥೈಃಅರ್ಥಕಾಮಾನಪೇಕ್ಷೈಃ॥ ನಿಖಿಲಜನಸುಹೃದ್ಭಿಃನಿರ್ಜಿತಕ್ರೋಧ ಲೋಭೈಃ ವರವರಮುನಿ ಭೃತ್ಯೈಃ ಅಸ್ತುಮೇ ನಿತ್ಯಯೋಗಃ॥ ಎಂಬ ಶ್ಲೋಕ ದಲ್ಲಿ ಪ್ರತಿಯೊಬ್ಬ ಶ್ರೀವೈಷ್ಣವನಿಗೂ ಅತ್ಯವಶ್ಯಕವಾಗಿ ಇರಬೇಕಾದ ಅನಿತರ ಸಾಧಾರಣವಾದ ಗುಣ ವಿಶೇಷಗಳು ವಿವರಿಸಲ್ಪಟ್ಟಿದೆ. ಸಕಲರೂ ಈ ಮಹಾಗುಣಗಳನ್ನು ನಿರಂತರವಾಗಿ ಹೊಂದಿ ಸಕಲ ಶ್ರೇಯಸ್ಸನ್ನೂ ಪಡೆಯಲಿ.

ಮಂಗಳಂ ಮುನಿವರ್ಯಾಯ ರಮ್ಯಜಾಮಾತೃ ಯೋಗಿನೇ ॥
ಯಚ್ಛಾತ್ರ ಭಾವಂ ಸಂಪ್ರಾಪ್ತಃ ಶ್ರೀ ಶಃ ಶ್ರೀರಂಗನಾಯಕಃ ॥
ಶ್ರೀಮತೇ ಸೌಮ್ಯ ಜಾಮಾತೃ ಮುನೀನ್ದ್ರಾಯ ಮಹಾತ್ಮನೇ ॥
ಶ್ರೀರಂಗವಾಸಿನೇ ಭೂಯಾತ್ ನಿತ್ಯಶ್ರೀಃ ನಿತ್ಯಮಂಗಳಂ ॥



